# ಸಪ್ತಗಿರಿ

ಬೆಲೆ : ರೂ. 2/-

ನ್ 1993



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ || ಪ ||

ಭಾಗವತರು ಕಂಡರೆತ್ತಿ ಕೊಂಡೊಯ್ಯುವರೊ || ಅ. ಪ. ||

ಸುರಮುನಿಗಳು ತಮ್ಮ ಹೃದಯ ಗಹ್ವರದಲ್ಲಿ
ಪರಮಾತ್ಮನ ಕಾಣದರಸುವರೊ
ದೊರಕದ ವಸ್ತುವಿಂದು ದೊರಕಿತು ತಮಗೆಂದು
ಹರುಷದಿಂದ ನಿನ್ನ ಕರೆದೆತ್ತಿ ಕೊಂಬರು || ೧ ||

ಅಗಣಿತ ಗುಣ ನಿನ್ನ ಜಗದ ನಾರಿಯರೆಲ್ಲ
ಹಗೆಯಾಗಿ ನುಡಿವರೊ ಗೋಪಾಲನೇ
ಮಗುಗಳ ಮಾಣಿಕ್ಯ ತಗುಲಿತು ಕರಕೆಂದು
ಬೇಗದಿಂದ ಬಂದು ಬಿಗಿದಪ್ಪಿಕೊಂಬರು || ೨ ||

ದಿಟ್ಟ ನಾರಿಯರೆಲ್ಲ ಇಷ್ಟವ ಸಲಿಸೆಂದು
ಅಟ್ಟಟ್ಟಿ ಬೆನ್ನಿಂದೆ ತಿರುಗುವರೋ
ಸೃಷ್ಟೀಶ ಪುರಂದರ ವಿಠಲರಾಯನೆ
ಇಷ್ಟಿಷ್ಟು ಬೆಣ್ಣೆಯ ಕೊಟ್ಟೇನೊ ರಂಗಯ್ಯ || ೩ ||

ಶ್ರೀ ಪುರಂದರದಾಸರು




ಗೌರವ ಸಂಪಾದಕರು :
ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ
ತಿ.ತಿ.ದೇ., ತಿರುಪತಿ.

ಸಂಪಾದಕ :
ಕೆ. ಸುಬ್ಬಾರಾವು ಎಂ.ಎ.

ಉಪಸಂಪಾದಕ :
ಬಿ.ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೨-೦೦.**
**ವಾರ್ಷಿಕ ಚಂದಾ ೨೪-೦೦)**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ||


**ಸಂಪುಟ ೨೪]** **ಜೂನ್ ೧೯೯೩** **[ಸಂಚಿಕೆ ೧**


# ವಿಷಯಸೂಚಿ



ಮುಖಚಿತ್ರ : ನಮ್ಮಾಳ್ವಾರ್ -- ಚಿತ್ರ -- ಜಗದೀಶ್.
ಹಿಂಬದಿಯಲ್ಲಿ : ಹೃಷೀಕೇಶದ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ.
ಒಳಗಡೆ : 1. ನಾರಾಯಣವನದಲ್ಲಿ ರಥೋತ್ಸವ.
2. ಶ್ರೀ ಗೋವಿಂದರಾಜಸ್ವಾಮಿ ರಥೋತ್ಸವ.




"ಬದುಕಿ ಏನು ಸಾಧಿಸಿದ್ದು" ಎಂಬುದು ಚಿರಂತನವಾದ ಪ್ರಶ್ನೆ. ಬದುಕಿಗೆ ಒಂದು ಗುರಿ ಇರಬೇಕು ಎಂಬ ಅವಧಾರಣಾತ್ಮಕವಾದ ಅರ್ಥ ಈ ನಾಣ್ನುಡಿಗೆ ಉಂಟು. ಪುರುಷಾರ್ಥ ಆಶ್ರಮಧರ್ಮ ಎಲ್ಲವನ್ನೂ ಹೇಳಿದರು ಹಿರಿಯರು. ಶ್ರೀ ಸಾಮಾನ್ಯನ ಸಮರಸದ ಬಾಳುವೆಗಾಗಿ. ಬಾಳು ವರ್ಷಚಕ್ರಕ್ಕಿಂತ ಹಿರಿದಾದಾಗ ಅದೊಂದು ಸಾಧನೆಯೆಂದೇ ತಿಳಿದು ಷಷ್ಠಿಪೂರ್ತಿ ಎಂದು ಆಚರಿಸಿದರು ಉತ್ಸವದಿಂದ. ಅದೊಂದು ಘಟ್ಟ -- ಅಲ್ಲಿಯವರೆಗೆ ಉಳಿದರೆ ಒಮ್ಮೆ ಬಂದ ದಾರಿಯಕಡೆಗೆ ಕಣ್ಣ ಹೊರಳಿಸಿ ಮುಂದಿನ ಮಾರ್ಗವನ್ನು ಹುಡುಕಿಕೊಳ್ಳಲು ತನ್ನೊಡನೆ ತನ್ನ ಸಮಾಜದ ಉನ್ನತಿಗಾಗಿ ದುಡಿಯುವ ಅವಕಾಶ ನೀಡುವ ಒಂದು ಒಳ ದರ್ಶನದ ಘಟ್ಟ.

ಇಂತಲ್ಲಿ ನೂರಾದರೆ, ಅದೊಂದು ಆನಂದದ ನಿಜವಾದ ಸಂಗತಿ ಸಾಮಾನ್ಯರಿಗೆ. ಸ್ವಾಮಿಗಳಿಗೆ! ಕಂಚಿಯ ಕಾಮಕೋಟಿ ಪೀಠಾಧಿಪತಿ ಶ್ರೀ ಶ್ರೀ ಚಂದ್ರಶೇಖರೇಂದ್ರ ಸರಸ್ವತಿಯರು ನೂರು ವರ್ಷಗಳನ್ನು ಸಮಾಜದ ಒಳಿತಿಗಾಗಿ ಪ್ರಾರ್ಥಿಸುತ್ತ ಪ್ರಯತ್ನಿಸುತ್ತ ಕಳೆದು ನಮ್ಮ ಮುಂದೆ ಇದ್ದಾರೆ. ಅವರಿಗೆ ಹೇಗೆನ್ನಿಸುತ್ತದೆ ಎಂಬುದು ಇಲ್ಲಿ ಅಪ್ರಸ್ತುತ. ಅದರಿಂದ ನಮಗೇನು ಎಂಬ ಪ್ರಶ್ನೆ. ಅದು ನಮ್ಮ ಭಾಗ್ಯ ಎಂಬುದೂ ನಮ್ಮ ಅದೃಷ್ಟ ಎಂಬುದೂ ಉತ್ತರ.

ಪೆರಿಯವರ್ (ಹಿರಿಯರು) ಎಂದೇ ಹೆಸರಾದ ಶ್ರೀ ಶ್ರೀಗಳು,1893 ರ ಮೇ ತಿಂಗಳಲ್ಲಿ ಹುಟ್ಟಿದ ಸ್ವಾಮಿನಾಥ-ತಮ್ಮ 13 ನೇ ವಯಸ್ಸಿನಲ್ಲಿ ಕಾಂಚೀಪುರದ ಮಠ ಸೇರಿದರು, ಚಂದ್ರಶೇಖರೇಂದ್ರ ಸರಸ್ವತೀ ಎಂಬ ಆಶ್ರಮ ನಾಮದಲ್ಲಿ. (ಪೀಠಾರೋಹಣ 13 ಫೆಬ್ರವರಿ 1907) ದೇಶವನ್ನೆಲ್ಲ ಸುತ್ತಿ ಸನಾತನಧರ್ಮದ ಒಳಮೌಲ್ಯಗಳನ್ನು ಬಿತ್ತರಿಸಿದ್ದೇ ಅಲ್ಲದೆ ಆಲಯ ಜೀರ್ಣೋದ್ಧಾರ, ಶಂಕರ ಮಂಟಪಗಳ ನಿರ್ಮಾಣ, ವೇದ ಆಗಮ ಸದಸ್ಸುಗಳನ್ನು, ತಿರುಪ್ಪಾವೈ ತಿರುವೆಂಬಾವೈ, ಸಮ್ಮೇಳನ ನಡೆಸುತ್ತ ದಾರಿದೀಪವಾದರು. ನಡೆದಾಡುವ ದಾರಿದೀಪವಾದರು. ಅವರು ಉಪದೇಶಸಾರವನ್ನು ಕಾಲ್ ಆಫ್ ಜಗದ್ಗುರು, ದೈವತ್ತಿನ್ ಕುರಲ್, ದೈವವಾಣಿ ಎಂಬುದಾಗಿ ವಿವಿಧ ಭಾಷೆಗಳಲ್ಲಿ ಕಾಣಬಹುದು. ಅಷ್ಟೇಕೆ ನಡಮಾಡುಂ ದೈವಂ (ಓಡಿಯಾಡುವ ದೈವ) ಎಂದೇ ಜನ ಕರೆಯುವಷ್ಟು ಹಿರಿಯರು ಅವರು. ಊಟ ಮಾಡುವಾಗ -- ಅಲ್ಲ ಅಡಿಗೆ ಮಾಡುವಾಗ ಹಿಡಿಯಕ್ಕಿಯನ್ನು ದಾನಕ್ಕಾಗಿ ತೆಗೆದಿಡಿ ಎಂಬ ಅವರ ಸಂದೇಶ ಜನಪ್ರಿಯ. ಅವರಿಗೆ ಆ ದಿನಗಳ ಸ್ವಾತಂತ್ರ್ಯ ಸತ್ಯಾಗ್ರಹದಲ್ಲೂ, ಖಾದಿ ಪ್ರಚಾರದಲ್ಲೂ, ಹಿಂದಿ ಪ್ರಚಾರದಲ್ಲೂ ವಿಶೇಷ ಆಸಕ್ತಿ, ಎಲ್ಲಕಾಲದಲ್ಲೂ ಶಾಂತಿ ಸಮಾಧಾನ ಸೌಹಾರ್ದಗಳಿಗೆ ಒತ್ತು ನೀಡಿ ಪರಮಾತ್ಮಮೇಕಂ ಬಹುನಾಮರೂಪಂ -- ಎಂಬ ದಿವ್ಯ ಜೀವನ ಸಂದೇಶ ನೀಡುತ್ತ ನಡೆದಿದ್ದಾರೆ.

ಈಗ ಎಂದರೆ ಎರಡೂವರೆ ದಶಕದಿಂದ ಅವರು ಮಾತು ಕಡಮೆ ಮಾಡಿದ್ದಾರೆ ಎಂದು ಹೇಳಿಕೆ. ಮೊದಲೂ ಅವರು ಕಡಮೆ ಮಾತಿನವರೇ ಎಂಬುದು ಹಲವು ಹಿರಿಯರ ಹೇಳಿಕೆ. "ಅವರು ಮಾತನಾಡಿದರೆ ನಾವೆಲ್ಲ ಕೇಳುತ್ತೇವೆ ಅಷ್ಟೆ" ಎಂಬುದು ಅವರ ಹತ್ತಿರದವರು ಹೇಳುವ ಮಾತು. ಕಡಮೆ ಮಾತನಾಡುವುದೂ ಒಂದು ಮೌಲ್ಯವೇ, ತೂಕವಾದ, ಮಾತು ಆಡಿದರೆ ಶಿವ ಮೆಚ್ಚಿ ಅಹುದೆನ್ನಬೇಕು. ಅಂತಹ ಹಿತವನ್ನು ಹೇಳುತ್ತ ನಮ್ಮ ನಡುವೆ ಇದ್ದಾರೆ. ಅದಕ್ಕಾಗಿ, ಶ್ರೀ ವೆಂಕಟೇಶ್ವರಸ್ವಾಮಿಗೆ ಕೃತಜ್ಞತೆ ಸೂಚಿಸುತ್ತ ಶ್ರೀಗಳವರ ಆಶೀರ್ವಾದವನ್ನು ಬೇಡುವ.

* * * * *

# ಈಶಾವಾಸ್ಯ--- ಶ್ರೀವೈಷ್ಣವತೆ

ಶ್ವದ ಅತ್ಯಂತ ಪುರಾತನವಾದ ಶಾಸ್ತ್ರ--ವೇದ ಭಾರತದ ಸಂಸ್ಕೃತಿಗೆ ವೇದವು ಮುಖ್ಯ ೦. ವೇದಗಳನ್ನು ಮಂತ್ರ, ಬ್ರಾಹ್ಮಣ, ಉಪ ್ ಎಂಬುವುದಾಗಿ ಮೂರು ವಿಭಾಗಗಳನ್ನು ಬಹುದು. ಭಾರತೀಯ ತತ್ವವಿಚಾರದ ಇತಿ ನಲ್ಲಿ ಉಪನಿಷತ್ತಿನ ಪಾತ್ರವು ಅದ್ವಿತೀಯವಾ ದ್ವಾಪರಯುಗದಲ್ಲಿ ಶ್ರೀಕೃಷ್ಣಪರಮಾತ್ಮನು ಗವದ್ಗೀತೆಯಲ್ಲಿ ಎಲ್ಲಾ ಉಪನಿಷತ್ತಿಗಳ ತತ್ವ ಸಾರವನ್ನು ಮಾನವರ ಹಿತಕ್ಕಾಗಿ ನೀಡಿದನು. ನತ್ರಯದಲ್ಲಿ ಮೊದಲನೆಯ ಸ್ಥಾನ ಉಪನಿ ಗಳಿಗೆ ನಾವು ನೀಡುತ್ತೇವೆ. ಕಾರಣ ಅದು ಂತವೆನಿಸಿ ತತ್ವಬೋಧಕವಾದುದು.

ಉಪನಿಷತ್ ಎಂಬ ಶಬ್ದಕ್ಕೆ ಬ್ರಹ್ಮವಿದ್ಯೆ ಎಂಬು ಗಿ ನಾವು ಅರ್ಥ ಮಾಡಬಹುದು. ವಿಶ ಗತಿ, ಅವಸಾದನ ಎಂಬುವ ಅರ್ಥಗಳುಳ್ಳ ಧಾತುವಿನ 'ಉಪ' 'ನಿ' ಎಂಬ ಉಪಸರ್ಗ , 'ಕ್ವಿಪ್' ಎಂಬ ಪ್ರತ್ಯಯವೂ ಬಂದು 'ಉಪ ್' ಎಂಬ ರೂಪವು ಬಂದಿರುತ್ತದೆ. ಉಪ ತ್ತುಗಳು ತತ್ವಹಿತವನ್ನು ಬೋಧಿಸಿದರೂ ಆ ವಾಣಿ ಸತ್ವದ ಅರಿವನ್ನು ನಮಗೆ ನೀಡಿ ಪರ ತ್ಮನ ಸಾಕ್ಷಾತ್ಕಾರಕ್ಕೆ ಉಪಕಾರಮಾಡಿ ಜೀವನ ತೊಳಲುವವರಿಗೆ ನಿತ್ಯವಾದ ಶಾಂತಿಯನ್ನು ುತ್ತದೆ. ಅನಾದಿಕಾಲದಿಂದ ವೇದ, ಬ್ರಾಹ್ಮಣ, ನಿಷತ್‌ಗಳಿಗೆ 'ಶ್ರುತಿ' ಎಂಬುವುದಾಗಿ ಕರೆಯು . ಶ್ರುತಿ ದೇವರು ಹೇಳಿದ ವಾಣಿಯೆಂದೇ ಗಳ ಮತ. ಅವು ಅಪೌರುಷೇಯ. ಉಪನಿ ಗಳು ಆದಿ ಪುರುಷನ ನಿಃಶ್ವಸಿತಗಳು ಎಂಬುವ ಕೆ ನಮ್ಮಲ್ಲಿ ಮುಂಚೆನಿಂದ ಇದೆ. ಪ್ರತಿ ಂದು ಉಪನಿಷತ್ತೂ ತಪಸ್ವಿಗಳ ತಪಃ ಪ್ರಭಾ ಂದ ದೈವ ಪ್ರಸಾದದಿಂದ ಪ್ರಾಪ್ತವಾದ ಜ್ಞಾನ ತ್ರಗಳು. ಬ್ರಹ್ಮವಸ್ತುವನ್ನು (ಉಪ) ಸಮೀಪ ನಿ-ಕೆಳಗೆ (ಷದ್) ಕುಳಿತು ಕಲಿಯುವ ವಿದ್ಯೆ ಪನಿಷತ್ ಶಬ್ದಕ್ಕೆ ಅರ್ಥ ಹೇಳಬಹುದು. ಉಪನಿ ' ಶಬ್ದದ ಉತ್ಪತ್ತಿಗೆ ಅನೇಕ ಅರ್ಥಗಳನ್ನು ಹೇಳಿ ೂ ಸಂಕ್ಷೇಪವಾಗಿ ಹೇಳಬೇಕಾದರೆ "ಚೇತನನ್ನು ಮಾತ್ಮನೆಡೆಗೆ ಕೊಂಡೊಯ್ಯುವ ಜ್ಞಾನ. ಅಥವಾ ್ರಪರಮಾತ್ಮನ ಸಂಬಂಧವನ್ನು ತಿಳಿಸುವ ದಿವ್ಯ ವ. ಪಾರ್ವಾತ್ಯ ಹಾಗೂ ಪಾಶ್ಚಾತ್ಯ ವಿದ್ವಾಂಸರು, ನಕರು, ಅನುಭಾವಿಗಳು, ಮುಮುಕ್ಷುಗಳು ಇವ

---ಕಂದಾಡೈಕೇಶವನ್.

ರೆಲ್ಲರೂ ಉಪನಿಷತ್ತುಗಳ ಮಹತ್ವ, ವಿವೇಚನಪದ್ಧತಿ, ಅವರಲ್ಲಿನ ಕಾವ್ಯವೈಭವ, ದಾರ್ಶನಿಕತ್ವ, ನೀತಿ ತತ್ವ, ಪರತತ್ವದ ಬೋಧನೆ, ವಿಚಾರಬಾಹುಲ್ಯ ವಿಷಯಗಾಂಭೀರ್ಯ, ಮನೋವಿಕಾಸವನ್ನು ಮಾಡುವ ಅಮೃತತ್ವದ ಕಲ್ಪನಾಸಾಮರ್ಥ್ಯ ಇವುಗಳಿಗೆ ಮಾರುಹೋಗಿ ಅವುಗಳಿಗೆ ಶರಣರಾಗಿದ್ದಾರೆ.

ಉಪನಿಷತ್ ಭಂಡಾರದಲ್ಲಿ ೧೦೮ ಉಪನಿಷತ್ತುಗಳು ಇದ್ದರೂ ಪೂರ್ವಾಚಾರ್ಯರಿಂದ ಅಧ್ಯಾತ್ಮ ಮೌಲ್ಯದ ಮಾನ್ಯತೆ ದೃಷ್ಟಿಯಿಂದ ಮನ್ನಣೆ ಪಡೆದಿರುವ ಉಪನಿಷತ್ತುಗಳು ದಶೋಪನಿಷತ್ತುಗಳು. ಅವು ಕ್ರಮವಾಗಿ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ ತೈತ್ತರೀಯ, ಛಾಂದೋಗ್ಯ ಬೃಹದಾರಣ್ಯಕ, ಹಾಗೂ ಐತರೇಯ, ದಶೋಪನಿಷತ್ತುಗಳಿಗೆ ಶ್ರೀಮತ್ ಶಂಕರಾಚಾರ್ಯರು ಅದ್ವೈತ ಪ್ರಕಾರ ವ್ಯಾಖ್ಯಾನ ರಚಿಸಿ ಉಪಕಾರ ಮಾಡಿದ್ದಾರೆ. ವಿಶಿಷ್ಟಾದ್ವೈತ ಪರ ಶ್ರೀಮನ್ನಿಗಮಾಂತ ಮಹಾದೇಶಿಕರೂ ಶ್ರೀ ನಾರಾಯಣರು (ಶ್ರೀ ಕೂರನಾರಾಯಣ ಸ್ವಾಮಿ



ಗಳೂ), ಪುರಿಶ್ರೀ ಶ್ರೀರಂಗಾಚಾರ್ಯ ಸ್ವಾಮಿಗಳ ಉಪನಿಷತ್ತುಗಳಿಗೆ ವ್ಯಾಖ್ಯಾನ ಬರೆದಿದ್ದಾರೆ. ಮೊದಲನೆಯದಾದ ಈಶಾವಾಸ್ಯೋಪನಿಷತ್ತನ್ನು ಕುರಿತು ಶ್ರೀ ವೇದಾಂತ ಮಹಾದೇಶಿಕರ ಹಾಗೂ ಶ್ರೀ ಕೂರನಾರಾಯಣಸ್ವಾಮಿಗಳ ವ್ಯಾಖ್ಯಾನ ಸಹಾಯದಿಂದ ವಿಶ್ಲೇಷಣೆ ಮಾಡಲಾಗಿದೆ.

## "ಈಶಾವಾಸ್ಯಮ್" :

ಈಶಾವಾಸ್ಯೋಪನಿಷತ್ ಪ್ರಥಮ ಶಬ್ದ ಈಶಾವಾಸ್ಯಮ್, ಇದನ್ನು ಅನುಸರಿಸಿ ಈಶಾವಾಸ್ಯೋಪನಿಷತ್ ಎಂದು ಉಪನಿಷತ್‌ಗೆ ಹೆಸರು ಬಂದಿದೆ. ಈಶ ಅಂದರೆ ಭಗವಂತ. ಶ್ರೀ ರಾಮಾನುಜರ ಸಿದ್ಧಾಂತದಂತೆ ತತ್ವಗಳು ಮೂರು ಚಿತ್, ಅಚಿತ್, ಈಶ್ವರ. ಭಗವಂತನನ್ನು ಈಶ ಎಂದು ಕರೆದಿರುವ ಈ ಉಪನಿಷತ್ತು ಜಗತ್ತೆಲ್ಲಾ ಈಶನಿಂದ ಆವೃತವಾದುದು ಎಂಬುವುದಾಗಿ ಘೋಷಿಸುತ್ತೆ.

ಈಶಾವಾಸ್ಯಮಿದಂ ಸರ್ವಂ
ಯತ್ಕಿಂಚ ಜಗತ್ಯಾಂ ಜಗತ್
ತೇನ ತ್ಯಕ್ತೇನ ಭುಂಜೀಥಾ
ಮಾಗೃಧಃ ಕಸ್ಯ ಸ್ವಿದ್ಧನಂ

ಈ ಮಂತ್ರವು ಶುಕ್ಲಯಜುರ್ವೇದದ ವಾಜಸನೇಯ ಸಂಹಿತೆ ೪೦ ನೆಯ ಅಧ್ಯಾಯದಲ್ಲಿ ಮೊದಲಾಗುತ್ತೆ. ಇದಕ್ಕೆ "ವಾಜಸನೇಯ ಸಂಹಿತೋಪನಿಷತ್" ಎಂದೂ ಕರೆಯುವ ವಾಡಿಕೆ ಇದೆ.

ಈ ಜಗತ್ತಿನ ಎಲ್ಲಾ ವಸ್ತುಗಳೂ ಭಗವಂತನಿಂದ ಆವರಿಸಲ್ಪಟ್ಟಿವೆ. ಅವುಗಳ ತ್ಯಾಗದಿಂದ ನೀನು ಸುಖಪಡು. ಬೇರೊಬ್ಬರ ಧನವನ್ನು ಬಯಸಬೇಡ ಎಂದು ಮೇಲಿನ ನೋಟಕ್ಕೆ ಅರ್ಥವಾದರೂ ದೇಶಿಕರು ತಮ್ಮ ವ್ಯಾಖ್ಯಾನದಲ್ಲಿ ಸೃಷ್ಟಿಗೆ ಮುನ್ನ ಚಿದಚಿತ್ ತತ್ವಗಳ ಸೂಕ್ಷ್ಮರೂಪದಿಂದ ಪರಮಾತ್ಮನಾದ ಶ್ರೀಮನ್ನಾರಾಯಣನು ವಿಶಿಷ್ಟರೂಪನಾಗಿರುತ್ತಾನೆ ಅವನೇ ಸೃಷ್ಟಿಗೆ ನಿಮಿತ್ತನು. ಪರಮಾತ್ಮನು ಸರ್ವವ್ಯಾಪಕನು. ದಿವ್ಯಮಂಗಳ ವಿಗ್ರಹನು, ಜ್ಞಾನಶಕ್ತಿ ಬಲೈಶ್ವರ್ಯಾದ್ಯನಂತ ಗುಣಯುತನು.

ಚರಾಚರಾಣಿ ಭೂತಾನಿ ಸರ್ವಾಣಿ ಭಗವದ್ವಪುಃ ಎಂಬುವುದು ಸತ್ಯ. ದೇವಾತ್ಮನಿಗೂ ಪರಮಾತ್ಮನಿಗೂ ಶೇಷ ಶೇಷಿ ಸಂಬಂಧವಿರುವುದನ್ನು

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5--00 | ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 | ಪ್ರಾ 7--00 |
| ತೋಮಾಲ ಸೇವೆ (ಆರ್ಜಿತ) | ಪ್ರಾ 7--30 | ಪ್ರಾ 8--00 |
| ಅರ್ಚನೆ (ಆರ್ಜಿತ) | ಪ್ರಾ 8--00 | ಪ್ರಾ 8--00 |
| ಸರ್ವದರ್ಶನ | ಪ್ರಾ 9--00 | ಪ್ರಾ 12--30 |
| | ಮ. 1--00 | ಸಂ 6--00 |
| | ರಾ. 7--00 | ಪ್ರಾ 8--45 |
| ಏಕಾಂತಸೇವೆ | | ರಾ. 9--00* |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ. 5--30 ರಿಂದ ಪ್ರಾ. 6--30 ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | |
|---|---|
| 1. ಗರುಡವಾಹನ | 32--00 |
| 2. ಚಂದ್ರಪ್ರಭ ವಾಹನ | 32--00 |
| 3. ಗಜವಾಹನ | 32--00 |
| 4. ಅಶ್ವವಾಹನ | 32--00 |
| 5. ಸಿಂಹವಾಹನ | 32--00 |
| 6. ಹಂಸವಾಹನ | 32--00 |
| 7. ಚಿಕ್ಕಶೇಷವಾಹನ | 32--00 |
| 8. ದೊಡ್ಡ ಶೇಷವಾಹನ | 62--00 |
| 9. ಸೂರ್ಯಪ್ರಭವಾಹನ | 62--00 |

### ಪಡಿಪ್ರಸಾದಗಳು

| | |
|---|---|
| 1. ದೋಸೆ ಕಾಲುಸೋಲು | 35--00 |
| 2. ದಧ್ಯೋದನ „ | 40--00 |
| 3. ಪುಳಿಯೋಗರೆ „ | 50--00 |
| 4. ಪೊಂಗಲು „ | 55--00 |
| 5. ಸಕ್ಕರಪೊಂಗಲ್ „ | 65--00 |
| 6. ಶಾಕರ ಭಾತ್ „ | 85--00 |
| 7. ಕೇಸರಿಭಾತ್ „ | 90--00 |
| 8. ಸೀರ „ | 155--00 |

ವಿವರಗಳಿಗೆ:
ಪೇಷ್ಕಾರ್,
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿ. ತಿ. ದೇ.

ಎಲ್ಲರೂ ಅರಿತಿದ್ದಾರೆ. ಎಲ್ಲವೂ ಪರಮಾತ್ಮನದೇ. ತಾನು ಅವನ ಅಧೀನ ತನ್ನ ರಕ್ಷಣೆಯ ಭಾರವೆಲ್ಲ ಅವನದೇ ಎಂಬುವ ಪ್ರಪತ್ತಿಯ ಭಾವ, ವಾಜಸನೇಯ ಸಂಹಿತೆಯ ಕೊನೆಯ ಅಧ್ಯಾಯದಲ್ಲಿ ಸರ್ವೇಶನು ಸರ್ವಭೂತ ಅಂತರಾತ್ಮನು. ದೋಷರಹಿತನು, ಕರ್ಮಾಧ್ಯಕ್ಷನು, ಯೇನಾವಾಸ್ಯಮಿದಂ ಸರ್ವಂ -- ಸರ್ವೇಶಾನಃ 'ಎಂಬ ಈ ಸಂಹಿತೆಯ ವಾಕ್ಯಗಳ ಅರ್ಥವೇ ಈಶಾವಾಸ್ಯಮಿದಂ ಸರ್ವಂ ಮಂತ್ರದ ಅಭಿಪ್ರಾಯ. ಭಗವದ್ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ಸ್ವಾಮಿ ಹೇಳುವ

ಅಸೌಮಹಾಹತಃ ಶತ್ರು
ಹ್ಯನಿಷ್ಯೇ ಚಾ ಪರಾನಪಿ
ಈಶ್ವರೋಹ ಮಹಂ ಭೋಗೀ
ಸಿದ್ಧೋಹಂ ಬಲವಾನ್ ಸುಖೀ

ಶತ್ರುಗಳನ್ನು ಕೊಲ್ಲುವವನೂ ಕೊಂದವನೂ ನಾನೇ. ನಾನೇ ಈಶ್ವರನು, ಭೋಗಿ, ಸಿದ್ಧ ಬಲಾಢ್ಯನು, ಸುಖೀ. ಶ್ರೀಮನ್ನಾರಾಯಣನು ನಿತ್ಯವಿಭೂತಿ. ಅವನ ಭಕ್ತಿಯಿಂದ ಮೋಕ್ಷಪ್ರಾಪ್ತಿ. ಈಶಾವಾಸ್ಯ ಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ಎಂಬುವುದರ ವಿವರಣೆ ಭಗವದ್ಗೀತೆಯ ವಾಸುದೇವಾತ್ಮಕಾನ್ಯಾಹುಃ ಕ್ಷೇತ್ರಂ ಕ್ಷೇತ್ರಜ್ಞಮೇವ ಚ ಎಂಬುವುದರ ನೇರ ಅರ್ಥ. ಈಶ್ವರನು ಎಲ್ಲಕ್ಕೂ ಒಡೆಯ, ಅವನಿಂದ ಎಲ್ಲವೂ ವ್ಯಾಪ್ತವಾಗಿದೆ (ಧರಿಸಲ್ಪಟ್ಟಿದೆ) ಇದಕ್ಕೆ ಆಧಾರ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ಎಂಬ ಪುರುಷೋತ್ತಮನನ್ನು ಸ್ತುತಿಸುವ ಶ್ರುತಿವಾಕ್ಯು

ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನಂ ಎಂಬುವ ಮಂತ್ರದ ವಿವರಣೆ ಭಾಗವತದಲ್ಲಿ ಬರುವ ಶ್ಲೋಕವೂ ಈಶಾವಾಸ್ಯ ಉಪನಿಷತ್‌ನ ಶ್ಲೋಕದಂತಿದೆ.

ಆತ್ಮಾವಾಸ್ಯಮಿದಂ ಸರ್ವಂ
ಯಜ್ಜಗತ್ಯಾಂ ಜಗನ್ಮನಃ
ತೇನ ತ್ಯಕ್ತೇನ ಭುಂಜೀಥಾಃ
ಮಾಗೃಧಃ ಕಸ್ಯಸ್ವಿದ್ಧನಂ

ಇದನ್ನು ಶ್ರೀಮಧ್ವಾಚಾರ್ಯರು ತಮ್ಮ ಭಾಷ್ಯದಲ್ಲಿ ಉದಹರಿಸಿದ್ದಾರೆ. ತೇನ ತ್ಯಕ್ತೇನ ಎಂಬುದನ್ನು ಶ್ರೀ ವೇದಾಂತದೇಶಿಕರು ಭೋಗಿಸಲ್ಪಡಲು ಯೋಗ್ಯವಾದುದೆಂಬ ಭ್ರಮೆಗೆ ಒಳಗಾದ ಜಗತ್ತು ತ್ಯಜಿಸಲು ಯೋಗ್ಯವೆಂದು ಮನಗೊಂಡು ಅದನ್ನು ತ್ಯಜಿಸಿ ಭುಂಜೀಥಾಃ ದೇಹಧಾರಣೆಗೆ ಬೇಕಾದನ್ನು ಮಾತ್ರ ಅನುಭವಿಸು. ಬೇರೆಯವರ ಧನವನ್ನು ಅಪೇಕ್ಷಿಸದೇ ನಿರತಿಶಯ ಭೋಗ್ಯನಾದ ಪರಮಾತ್ಮನನ್ನು ಉಪಾಸಿಸು ಎಂಬುವುದಾಗಿ ವಿವರಣೆ ಕೊಟ್ಟಿದ್ದಾರೆ.

ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇಚ್ಛತಂ ಸಮಾಃ
ಏವಂ ತ್ವಯಿ ನಾನ್ಯಥೇತೋಸ್ತಿ
ನ ಕರ್ಮ ಲಿಪ್ಯತೇ ನರಾಃ

ಈ ಲೋಕದಲ್ಲಿ ಶಾಸ್ತ್ರವಿಹಿತವಾದ ಕರ್ಮಗಳನ್ನು ಫಲಸಂಗ ಕರ್ತೃತ್ವಾದಿಗಳನ್ನು ಬಿಟ್ಟವನಾಗಿ ಮಾಡುತ್ತಾ ನೂರು ವರ್ಷ ಜೀವಿಸಲು ಇಚ್ಛೆ ಪಡಬೇಕು. ಇದರಿಂದ ಕರ್ಮಲೇಪನವಾಗುವುದಿಲ್ಲ. ಕರ್ಮವು ನಿನ್ನನ್ನು ಬಂಧಿಸುವುದಿಲ್ಲ.

ಶುಕ್ಲಯಜುರ್ವೇದದ ಮಂತ್ರವೂ ಕೂಡ ನಾವು ಪ್ರತಿನಿತ್ಯ ಸಂಧ್ಯಾವಂದನೆ ಮಾಡುವಾಗ ಜಪಿಸುವುದು ಹೀಗೆಂದು :

ತಚ್ಚಕ್ಷುರ್ದೇವಹಿತಂ
ಪುರಸ್ತಾತ್ ಶುಕ್ರ ಮುಚ್ಚರತು
ಪಶ್ಯೇಮ ಶರದಃ ಶತಂ
ಜೀವೇಮ ಶರದಃ ಶತಮ್
ಶೃಣುಯಾಮ ಶರದಃಶತಮ್
ಪ್ರಬ್ರವಾಮ ಶರದಃ ಶತಮ್
ಅದೀನಾಃ ಸ್ಯಾಮ ಶರದಃ ಶತಂ
ಭೂಯಾಶ್ಚ ಶರದಃ ಶತಮ್

ಜಗದ ಕಣ್ಣಿನಂತೆ ಇರುವ ದೇವರಿಗೆ ಪ್ರಿಯನಾದ ಸೂರ್ಯ ಪೂರ್ವದಲ್ಲಿ ಉದಯಿಸುತ್ತಿರಲು, ನಾವು ನೂರು ವರ್ಷಗಳು ಅವನನ್ನು ನೋಡುವ. ನೂರುವರ್ಷ ಜೀವಿಸುವ. ನೂರುವರ್ಷಗಳ ಅವನ ಮಹಿಮೆ ಕೇಳುವ. ನೂರುವರ್ಷ ನಾವು ಸಂಭಾಷಿಸುವ. ನೂರುವರ್ಷಗಳ ಭವ್ಯಜೀವನವನ್ನು ಕಳೆಯುವ-- ಹೀಗೆಂದು ಪ್ರಾರ್ಥನೆ. ಕರ್ಮವನ್ನು ಮಾಡುತ್ತಲೇ ನಾವು ನೂರುವರ್ಷ ಬದುಕಬೇಕು. ಕರ್ಮ ಫಲದ ಮೇಲೆ ಆಸಕ್ತಿ ಇಲ್ಲದೆ ಕರ್ಮಮಾಡುತ್ತಿರಲು ಆ ಕರ್ಮ ನಮಗೆ ಅಂಟುವುದಿಲ್ಲ. ಅದರಿಂದ ಬಂಧನವಾಗುವುದಿಲ್ಲ. ಜ್ಞಾನ ಕರ್ಮಗಳೆರಡೂ ಮೋಕ್ಷದಾಯಕವೆಂದು ವಿಶಿಷ್ಟಾದ್ವೈತ ಸಿದ್ಧಾಂತ. ಯಾವಜ್ಜೀವ ಪರ್ಯಂತ ನಿತ್ಯನೈಮಿತ್ತಿಕ ಕರ್ಮಾಚರಣೆ ಮಾಡಬೇಕು.

ಇದಕ್ಕೆ ಭಗವದ್‌ರಾಮಾನುಜರು ತಮ್ಮ ಭಾಷ್ಯದಲ್ಲಿ--

ಕುರ್ವನ್ನೇವೇಹ ಕರ್ಮಾಣೀ
ತ್ಯಾತ್ಮವಿದಂ ಜ್ಞಾನಾದ್ವ್ಯಾವರ್ತ್ಯ

ಯಾವಜ್ಜೀವಂ ಕರ್ಮಾನುಷ್ಠಾನೇ
ನಿಯಮಯತೀತಿ ತನ್ನೋಪಪದ್ಯತೇ

ಎಂಬುವುದಾಗಿ ವಿದ್ಯಾಂಗಭೂತವಾದ ಕರ್ಮ ನ್ನು ಬ್ರಹ್ಮವಿದನು ಮಾಡಬೇಕೆಂಬ ಅಭಿಪ್ರಾಯ ನ್ನು ಪಟ್ಟಿದ್ದಾರೆ. ಕರ್ಮಣ್ಯೇ ವಾಧಿಕಾರಸ್ತೇ ಾಫಲೇಷು ಕದಾಚನ ಹಾಗೂ ತಸ್ಮಾದಸಕ್ತಃ ತತಂ ಕಾರ್ಯಂ ಕರ್ಮ ಸಮಾಚರ ಮತ್ತು ಪ್ಯತೇನ ಸ ಪಾಪೇನ ಪದ್ಮಪತ್ರ ಮಿವಾಂಭಸಾ" ಂಬುವ ಭಗವದ್ಗೀತೆಯ ನಿಷ್ಕಾಮ ಕರ್ಮಯೋ ದ ಮಂತ್ರಗಳಿಗೆ ಈ ಉಪನಿಷತ್ತಿನ ಮಂತ್ರವು ಳಹದಿಯಾಗಿದೆ. ಭಗವದ್ಗೀತೆಯಲ್ಲೂ ಕೂಡ ನಾಸಕ್ತಿಯಿಂದ ಮಾಡಿದ ಕರ್ಮದಿಂದ ಕರ್ಮಲೇ ನವಾಗುವುದಿಲ್ಲವೆಂದು ಶ್ರೀ ಕೃಷ್ಣ ಪರಮಾತ್ಮನ ುದೇಶ. ಪಾಶ್ಚಾತ್ಯ ಮ್ಯಾಕ್ಸ್‌ಮುಲರೂ ಕೂಡ ದನ್ನೇ ಪುಷ್ಟೀಕರಿಸುತ್ತಾ ಯಾವಜ್ಜೀವವೂ ಯಜ್ಞ ಾಗಾದಿ ಕರ್ಮಗಳನ್ನು ಭಗವ್‌ದುಪಾಸನರೂ ವಾಗಿ ಬ್ರಹ್ಮಜ್ಞಾನಿಗಳೂ ಸಹ ಮಾಡಬೇಕೆಂದು ಾಚಿಸಿ ಶ್ರೀಮತ್‌ರಾಮಾನುಜರ ಸಿದ್ಧಾಂತಕ್ಕೆತಮ್ಮ ಮ್ಮತವನ್ನು ಸೂಚಿಸುತ್ತಾರೆ. ಮುಂದೆ ಮೂರ ಯ ಮಂತ್ರದಲ್ಲಿ ಆಚಾರ್ಯರು ಆಸುರ ಪ್ರಕೃತಿ ಳುಳ್ಳವರು ಶಾಸ್ತ್ರ ವಿಧಿಯನ್ನು ತ್ಯಜಿಸಿ ಯಜ್ಞಾದಿ ರ್ಮಗಳನ್ನು ಆಚರಿಸುತ್ತಾರೆ. ನಿಷಿದ್ಧ ಕರ್ಮವನ್ನು ಾಡುತ್ತಾರೆ. ಅವರು ಆತ್ಮಘಾತಿಗಳು. ನರಕವನ್ನು ಡೆಯುತ್ತಾರೆ ಎಂಬುವ ಅರ್ಥವನ್ನು ಮೂರನೆಯ ಂತ್ರವಾದ

ಅಸುರ್ಯಾನಾಮತೇ ಲೋಕಾ
ಅಂಧೇನ ತಮಸಾವೃತಾಃ
ತಾಂ ಸ್ತೇ ಪ್ರೇತ್ಯಾಭಿಗಚ್ಛಂತಿ
ಯೇ ಕೇಚಾ ತ್ಮಹನೋಜನಾಃ

ಎಂಬುವುದಕ್ಕೆ ಅರ್ಥ ನೀಡುತ್ತಾರೆ. ವೇದಾಂತ ೇಶಿಕರು ಆತ್ಮಹನರು ಎಂಬುವುದನ್ನು ವಿವರಿಸು ಾಗ "ಬ್ರಹ್ಮಜ್ಞಾನ ವಿಹೀನಾಃ ಕಾಮ್ಯನಿಷಿದ್ಧಕರ್ಮಾ ುನಿಷ್ಠಾಃ" ಎಂಬುವುದಾಗಿ ಅರ್ಥ ಹೇಳಿದ್ದಾರೆ. ಬ್ರಹ್ಮ ನ್ನರಿಯದವರು ನಿಷಿದ್ಧ ಕರ್ಮಗಳನ್ನು ಆಚರಿಸು ವವರು ಆತ್ಮ ಘಾತಿಗಳು. ಬ್ರಹ್ಮಜ್ಞಾನಿಗಳು ಭಗ ವದಾರಾಧನ ರೂಪವಾದ ನಿಷ್ಕಾಮಕರ್ಮಗಳನ್ನು ಮಾಡಬೇಕೆಂದು ಶ್ರೀರಾಮಾನುಜರ ಮತ.

ಅನೇಜದೇಕಂ ಮನಸೋಜವೀಯೋ
ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್
ತದ್ಧಾವತೋsನ್ಯಾನ ತ್ಯೇತಿ ತಿಷ್ಠತ್
ತಸ್ಮಿನ್ನಪೋ ಮಾತರಿಶ್ವಾ ದಧಾತಿ

ಈ ಆತ್ಮವು ಅಚಲವು. ಸರ್ವಪ್ರಾಣಿಗಳಲ್ಲಿಯೂ ಒಂದೇ ಆಗಿದೆ. ಅದು ಮನಸ್ಸಿಗಿಂತ ವೇಗವ ತ್ತರವು. ಪೂರ್ವಗಾಮಿಯಾದ ಇದನ್ನು ಇಂದ್ರಿಯ ಗಳು ಪಡೆಯಲಿಲ್ಲ. ಅದು ಇದ್ದಲ್ಲೇ ಮನಸ್ಸು, ವಾಕ್ಕು ಇಂದ್ರಿಯ ಮೊದಲಾಗುವುಗಳನ್ನು ದಾಟುತ್ತಲೇ ಆ ಪರವಸ್ತುವಿನಲ್ಲಿ ವಾಯುವು ಪ್ರಾಣಿಗಳ ಕಾರ್ಯಗ ಳನ್ನು ನಡೆಸುತ್ತದೆ.

ಐದನೆಯ ಮಂತ್ರವು ಹಿಂದಿನ ಮಂತ್ರವನ್ನು ಪುನಃ ಸ್ಮರಿಸುತ್ತದೆ.

ತದೇಜತಿ ತನ್ನೈಜತಿ
ತದ್ದೂರೇ ತದ್ವಂತಿಕೇ
ತದಂತರಸ್ಯ ಸರ್ವಸ್ಯ
ತದು ಸರ್ವಸ್ಯಾಸ್ಯ ಬಾಹ್ಯತಃ

ಆ ವ್ಯಾಪ್ತತತ್ವವು ಚಲಿಸುತ್ತದೆ. ಚಲಿಸುವುದಿಲ್ಲ ಅದು ದೂರದಲ್ಲಿದೆ ಹಾಗೂ ಹತ್ತಿರದಲ್ಲಿದೆ. ಅದು ಈ ಜಗತ್ತಿನ ಒಳಗೂ ಹಾಗೂ ಹೊರಗೂ ಇದೆ. ಇಲ್ಲಿ ವಿಶಿಷ್ಟಾದ್ವೈತದ ಪ್ರಕಾರ ಯಾರ ಮನಸ್ಸು ಗೋವಿಂದನಿಗೆ ವಿಮುಖವಾಗಿಯೂ ವಿಷಯಾಸಕ್ತ ವಾಗಿಯೂ ಇದೆಯೋ ಅಂತಹವರಿಗೆ ಪರಬ್ರಹ್ಮವು ಅತಿ ದೂರನಾಗಿದ್ದಾನೆ. ಎಂದಮೇಲೆ ಸಮೀಪ ದಲ್ಲೂ ಇದ್ದಾನೆ ಎಂಬುವುದರ ದ್ವಂದ್ವಾರ್ಥಕ್ಕೆಸಮಾ ಧಾನ ಯಾರ ಮನಸ್ಸು ಗೋವಿಂದನಲ್ಲಿ ತನ್ಮಯ ವಾಗಿ ಇದೆಯೋ ಅಂತಹವನಿಗೆ ಅವನು ಸಮೀ ಪವೆಂದೇ ಅರ್ಥ. ಇದು ಶೌನಕ ಮಹರ್ಷಿಯ ಅಭಿಪ್ರಾಯವೂ ಆಗಿದೆ. ತದಂತರಸ್ಯ ಸರ್ವಸ್ಯ ಎಂಬುವುದರ ಅರ್ಥ ಪರಮಾತ್ಮನು ಎಲ್ಲಾ ವಸ್ತು ಗಳಲ್ಲೂ ಇದ್ದಾನೆ ಎಂಬುವುದು. ಶ್ರೀರಾಮಾನುಜರ ಪ್ರಕಾರ ಪರಮಾತ್ಮನು ಅಸಂಖ್ಯಾತ ಕಲ್ಯಾಣ ಗುಣ ಮಹೋದಧಿ. ಇಲ್ಲಿ ಪರಮಾತ್ಮನ ಗುಣವೈಚಿತ್ರ ವನ್ನುತೋರಿಸುತ್ತದೆ. ಯಃ ಪೃಥಿವ್ಯಾಂ ತಿಷ್ಠನ್‌ಯಃ ಆತ್ಮನಿ ತಿಷ್ಠನ್ ಎಂಬುವ ಬೃಹದಾರಣ್ಯಕೋಪನಿ ಷತ್ತಿನಲ್ಲಿ ಹೇಳಿರುವ ಅವನು ಪೃಥ್ವಿಯಲ್ಲಿರುವನು ಅವನು ಆತ್ಮದಲ್ಲಿರುವನು ಎಂಬುವುದನ್ನು ಪುಷ್ಟೀ ಕರಿಸುತ್ತದೆ.

ಯಸ್ತು ಸರ್ವಾಣಿ ಭೂತಾನಿ
ಆತ್ಮನ್ಯೇವಾನು ಪಶ್ಯತಿ
ಸರ್ವ ಭೂತೇಷು ಚಾ ತ್ಮಾನಂ
ತತೋ ನ ವಿಜುಗುಪ್ಸತೇ

ಶ್ರೀ ವೇದಾಂತದೇಶಿಕರು ಯಸ್ತು ಎಂದರೆ ಬ್ರಹ್ಮ ವಿದನ ಮಹಿಮೆಯನ್ನು ವರ್ಣಿಸುತ್ತಾ ಯಾರು ಸರ್ವಪ್ರಾಣಿಗಳಲ್ಲಿ ಆತ್ಮನನ್ನು, ಸರ್ವ ಪ್ರಾಣಿಗಳನ್ನು ತನ್ನ ಆತ್ಮನಲ್ಲಿ ನೋಡುವನೋ ಅವನಿಗೆ ಜುಗುಪ್ಸೆ ಉಂಟಾಗುವುದಿಲ್ಲ. ಇಲ್ಲಿ ಆತ್ಮ ಎಂಬುವ ಪದಕ್ಕೆ ಪರಮಾತ್ಮನೆಂಬುವ ಅರ್ಥವನ್ನು ಮಾಡ ಬೇಕು. ಸರ್ವವಸ್ತುಗಳೂ ಪರಮಾತ್ಮನಲ್ಲಿ ನೆಲೆಸಿವೆ. ಸರ್ವವಸ್ತುಗಳಲ್ಲಿಯೂ ಪರಮಾತ್ಮನು ವ್ಯಾಪಿಸಿದ್ದಾ ನೆಂದು ಈ ಮಂತ್ರದ ಅರ್ಥ. ಈ ಮಂತ್ರಕ್ಕೆ ಇತರ ಆಧಾರಗಳು :

ಸರ್ವಭೂತಸ್ಥಮಾತ್ಮಾನಂ
ಸರ್ವಭೂತಾನಿ ಚಾತ್ಮನಿ --ಕೈವಲ್ಯಶ್ರುತಿ

ಸರ್ವಭೂತಸ್ಥಮಾತ್ಮಾನಂ
ಸರ್ವಭೂತಾನಿ ಚಾತ್ಮನಿ --ಭಗವದ್ಗೀತೆ

ಸರ್ವಭೂತಾತ್ಮಾ
ಕುರ್ವನ್ನಪಿ ನಲಿಪ್ಯತೇ --ಭಗವದ್ಗೀತೆ

ಈ ಮಂತ್ರದಲ್ಲಿ ಹೇಳಿದ ಸರ್ವವೂ ಬ್ರಹ್ಮಾತ್ಮಕ ವೆಂದು ದೇಶಿಕರು ತಿಳಿಸಿ ಏಳನೆಯ ಮಂತ್ರವನ್ನು ಹೇಳುವಾಗ--

ಯಸ್ಮಿನ್ ಸರ್ವಾಣಿ ಭೂತಾನಿ
ಆತ್ಮಾಏವ ಅಭೂತ್ ವಿಜಾನತಃ
ತತ್ರ ಕೋ ಮೋಹಃ ಕಃ ಶೋಕಃ
ಏಕತ್ವಂ ಅನು ಪಶ್ಯತಃ

ಈ ಮಂತ್ರದಲ್ಲಿ ಶೋಕ ಮೋಹಗಳು ಅಜ್ಞಾನಿಗೆ ಆಗುವುದು. ಆತ್ಮನೇ ಸರ್ವಭೂತಸ್ಥನಾಗಿ ಸರ್ವವಿ ಶಿಷ್ಟನೆಂದು ಯಾವನು ತಿಳಿದಿರುವನೋ ಅಂತಹ ವನಿಗೆ ಶೋಕವೆಲ್ಲಿ. ಮೋಹವೆಲ್ಲಿಯದು! ಜನಕ ಮಹಾರಾಜನ ನಿರ್ಮಮತೆಯು ನಿದರ್ಶನ. ಆತನ ವಾಕ್ಕು--

ಅನಂತಂ ಬತಮೇ ವಿತ್ತಂ
ಯಸ್ಯ ಮೇನಾಸ್ತಿ ಕಿಂಚನ
ಮಿಥಿಲಾಯಾಂ ಪ್ರದೀಪ್ತಾಯಾಂ
ನಮೇ ಕಿಂಚಿತ್ ಪ್ರದಹ್ಯತೇ

ಎಂದರೆ ನನ್ನ ಐಶ್ವರ್ಯವು ನನ್ನದೇನೂ ಅಲ್ಲ. ಮಿಥಿಲೆ ಸುಟ್ಟುಹೋದರೆ ನನ್ನದೇನೂ ಸುಡಲಿಲ್ಲ ಎಂಬ ನಿರ್ಮಮತೆ ಎಲ್ಲರಿಗೂ ಬರುವುದು ಕಷ್ಟ.

ಈ ಮಂತ್ರಕ್ಕೆ ವೇದಾಂತದೇಶಿಕರು ಪರಮಾತ್ಮ ನಿಗೂ ಚಿದಚಿದ್ವಸ್ತುಗಳಿಗೂ ಮೋಕ್ಷದಲ್ಲಿ ಭೇದ ವಿರುವುದಾದರೂ ಶರೀರವಿಶಿಷ್ಟನಾದ ಅಜೀವಾ ತ್ಮನೂ ಶರೀರವೂ--

ಸರ್ವ ಭೂತೇಷ್ವೇಕತ್ವೇನ
ಪರಮಾತ್ಮಾನಂ ವಿಜಾನತಃ



# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ:

ಶ್ರೀನಿವಾಸನ ಹಾಡುಗಳು-ಭಾಗ-೨ (ಶ್ರೀಪಾದರಾಜರು,
ವ್ಯಾಸರಾಯರು, ವಾದಿರಾಜರು, ಕನಕದಾಸರು) ೪-೫೦
ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ)
-ವಿ. ಬಾದರಾಯಣ ಮೂರ್ತಿ ೧೨-೫೦
ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ)
-ಬನ್ನಂಜೆ ಗೋವಿಂದಾಚಾರ್ಯ ೭-೦೦
ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ,
ಹಿಂದಿ, ಚಿತ್ರವಿವರಣೆ) -ಸಂ. ಕೆ. ಅಪ್ಪಣ್ಣಾಚಾರ್ಯ ೩-೭೫
ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ,
ಹಿಂದಿ, ಚಿತ್ರವಿವರಣೆ) - ಸಂ. ಕೆ. ಅಪ್ಪಣ್ಣಾಚಾರ್ಯ ೨-೨೫
ಸ್ತೋತ್ರ ಕುಸುಮಮಾಲಾ -ಸಂ. ವೆಂಕಟಾಚಲ ೩-೦೦
ಆಚಾರಗಳು ಆಡಂಬರಗಳು -ಕೆ. ಚಂದ್ರಮೌಳಿ ೦-೪೦
ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೦-೫೦
" " (ಕನ್ನಡ ಲಿಪಿಯಲ್ಲಿ) ೦-೧೨

### ಮಕ್ಕಳಿಗಾಗಿ:

ಶ್ರೀಪಾದರಾಜರು -ಎಂ. ಎಸ್. ಗುಂಡೂರಾವ್ ೦-೭೫
ಮಹಿಪತಿದಾಸರು -ಶಾನಭಾಗ ೦-೮೫
ಪ್ರಸನ್ನ ವೆಂಕಟದಾಸರು -ವಿ. ಬಾದರಾಯಣಮೂರ್ತಿ ೦-೮೦
ಗೋಪಾಲದಾಸರು -ರುಕ್ಮಿಣಿಗಿರಿಮಾಜ ೦-೭೫

### ಹಿಂದಿ:

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ
-ಡಾ. ಎಂ. ಸಂಗಮೇಶಂ ೦-೨೦
ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) ೧೧-೦೦
ತೀರ್ಥರಾಜ ತಿರುಪತಿ -ಡಾ. ಎಂ. ಸಂಗಮೇಶಂ ೧-೫೦

### ಸಂಸ್ಕೃತ:

ಶ್ರೀ ವೇಂಕಟೇಶ್ವರ ಸುಪ್ರಭಾತಂ ೦-೧೨
ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ ೦-೬೨
ಕಠೋಪನಿಷತ್ -ಡಾ. ಕೆ. ಸಿ. ವರದಾಚಾರಿ ಹಾಗೂ
ಡಾ. ಡಿ. ತಾತಾಚಾರ್ಯ ೧೫-೦೦
ಮಾರ್ಕಂಡೇಯ ಸಂಹಿತಾ ೧೮-೦೦
ತತ್ತ್ವಸಂಖ್ಯಾನಂ -ಆರ್. ರಾಮಮೂರ್ತಿ ಶರ್ಮಾ ೨-೦೦
ಬ್ರಹ್ಮಸೂತ್ರ ಭಾಷ್ಯ (ಭಾಗ-೧)
-ಆರ್. ರಾಮಮೂರ್ತಿ ಶರ್ಮಾ ೩೦-೦೦
ಅಲಂಕಾರ ಸಂಗ್ರಹ ಸಂ-ಕೆ. ಭಾಸ್ಕರರಾವ್ ೧೬-೦೦
ಸೀತಾರಾಮಾಂಜನೇಯಂ
-ಡಾ. ಡಿ. ಅರ್ಕಸೋಮಯಾಜಿ ೫೦-೦೦
ಪ್ರಶ್ನೋಪನಿಷತ್ ೧೧-೦೦
ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ
-ಸಂ-ಡಾ. ಎಸ್. ಬಿ. ರಘುನಾಥಾಚಾರ್ಯ ೨೫-೦೦

೧೦೦೦ ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ ೩೦ಶತಾಂಶ ರಿಯಾಯಿತಿಯೂ, ೫೦೦ ರೂಗಳಿಂದ ೧೦೦೦ ರೂ.ವರೆಗೆ ೨೫ಶತಾಂಶ ರಿಯಾಯಿತಿಯೂ, ೧೦೦ ರೂ.ಗಳಿಂದ ೫೦೦ ರೂ.ವರೆಗೆ ೧೫ಶತಾಂಶ ರಿಯಾಯಿತಿಯೂ ಉಂಟು

ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ.

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ. ತಿ. ದೇ. ತಿರುಪತಿ.

ಎಂಬುವುದರಿಂದ ಒಂದೆನ್ನುವ ಭಾವ ಚೆದಚಿದ್ವಿಶಿಷ್ಟ ಪರಮಾತ್ಮನ ಏಕತ್ವವನ್ನು ಬೋಧಿಸುತ್ತದೆ ಎಂಬುವ ಅಭಿಪ್ರಾಯ ಪಟ್ಟಿದ್ದಾರೆ. ಎಂಟನೆಯ ಮಂತ್ರ ಆತ್ಮನ ಸ್ವರೂಪವನ್ನು ತಿಳಿಸುತ್ತದೆ.

ಸ ಪರ್ಯಗಾತ್ ಶುಕ್ರಂ ಅಕಾಯಂ ಅವ್ರಣಂ
ಅಸ್ನಾವಿದಂ ಶುದ್ಧಂ ಅಪಾಪವಿದ್ಧಮ್
ಕವಿಃ ಮನೀಷೀ ಪರಿಭೂಃ ಸ್ವಯಂಭೂಃ
ಯಾಥಾ ತಥ್ಯತಃ ಅರ್ಥಾನ್ ವ್ಯದಧಾತ್
ಶಾಶ್ವತೀಭ್ಯ ಸಮಾಭ್ಯಃ

ಆತ್ಮನು ಸರ್ವವ್ಯಾಪೀ, ಜ್ಯೋತಿರ್ಮಯನು, ಶರೀರವಿಲ್ಲದವನು, ಅಕ್ಷತನು, ನರಗಳಿಲ್ಲದವನು, ಶುದ್ಧನು, ಪುಣ್ಯಾ ಪುಣ್ಯರೂಪ ಕರ್ಮದಿಂದ ಕೂಡಿದವನು. ಕಲಿಯು, ಸರ್ವಜ್ಞನು, ಸರ್ವೋತ್ತಮನು, ಸ್ವಯಂಭೂ, ವಿವೇಕಿ. ಬ್ರಹ್ಮ ಪ್ರಾಪ್ತಿಯಾಗುವವರೆಗೂ ವಿರೋಧಗಳನ್ನು ಹೋಗಲಾಡಿಸಿ ಸಕಲ ಸೃಷ್ಟಿ ಪದಾರ್ಥಗಳ ವ್ಯವಸ್ಥೆಗೆ ಕಾರಣಭೂತನು. ಕರ್ಮಶರೀರ ರಹಿತನು.

ಜ್ಞಾನದೊಡನೆ ಆಚರಿಸಿದ ಧರ್ಮವು ಶ್ರೇಯಸ್ಕರ. ಕೇವಲ ಕರ್ಮಾವಲಂಬಿಗಳು ಹಾಗೂ ವಿದ್ಯಾವಲಂಬಿಗಳು ನಿಶ್ರೇಯಸ್ಸನ್ನು ಹೊಂದುವರು ಎಂಬುವುದಾಗಿ ಒಂಬತ್ತನೆಯ ಮಂತ್ರದ ಸಾರಾಂಶ--

ಅಂಧಂ ತಮಃ ಪ್ರವಿಶಂತಿ
ಯೋಽವಿದ್ಯಾಮುಪಾಸತೇ
ತತೋ ಭೂಯ ಏವತೇ
ತಮೋ ಯ ಉ ವಿದ್ಯಾಯಾಂ ರತಾಃ

ಇಲ್ಲಿ ಜ್ಞಾನವಿಲ್ಲದೆ ಕರ್ಮೋಪಾಸನೆಯನ್ನು ಮಾಡುವವರಿಗಿಂತ ಕರ್ಮವನ್ನು ಬಿಟ್ಟು ದೇವತೆಗಳ ಉಪಾಸನೆ ಮಾಡುವವರು ಕಗ್ಗತ್ತಲೆಯನ್ನೆ ಪೊಗುವರ್ ಎಂಬರ್ಥ.

ಅನ್ಯದೇವಾಹುರ್ವಿದ್ಯಯಾ
ಅನ್ಯದಾಹುರವಿದ್ಯಯಾ
ಇತಿ ಶುಶ್ರುಮ ಧೀರಾಣಾಂ
ಯೇ ನಸ್ತದ್ವಿಚ ಚಕ್ಷಿರೇ

ವಿದ್ಯೆಯ ಫಲವುದೇರೆ. ಅವಿದ್ಯೆಯ ಫಲವುದೇರೆ ಎಂದು ನಮ್ಮ ಪೂರ್ವಾಚಾರ್ಯರು ನಮಗೆ ಉಪದೇಶಿಸಿದರು.

ವಿದ್ಯಾಂ ಚಾ ವಿದ್ಯಾಂ ಚ
ಯಸ್ತ ದ್ವೇದೋ ಭಯಂ ಸಹ
ಅವಿದ್ಯಯಾ ಮೃತ್ಯುಂ ತೀರ್ತ್ವಾ
ವಿದ್ಯಯಾ ಅಮೃತಮಶ್ನುತೇ

ಸಮ್ಯಕ್ ಉಪದೇಶವನ್ನು ಪಡೆದವನು ಪರಮಾತ್ಮನ ಚಿಂತನಾರೂಪವಾದ ವಿದ್ಯೆಯನ್ನು (ಜ್ಞಾನವನ್ನೂ) ಅದಕ್ಕೆ ಅಂಗವಾದ ಕರ್ಮವನ್ನೂ ಅರಿತು ಅವಿದ್ಯೆಯ ದ್ವಾರಾ ಮೃತ್ಯುವನ್ನು ದಾಟಿ ವಿದ್ಯೆಯ ದ್ವಾರಾ ಮೋಕ್ಷವನ್ನು ಪಡೆಯುತ್ತಾನೆ. ಇಲ್ಲಿ ವಿಷ್ಣುಪ್ರಾಣದ ಬ್ರಹ್ಮವಿದ್ಯಾಮಧಿಪ್ಯಾಯ ಕರ್ತುಂ ಮೃತ್ಯುಮವಿದ್ಯಯಾ ಎಂಬುವುದು ಸ್ಮರಣೀಯ.

ವಿಪ್ರರಿಗೆ ತಪಸ್ಸು ಮತ್ತು ವಿದ್ಯೆ ನಿಃಶ್ರೇಯಸ್ಕರ. ತಪಸ್ಸಿನಿಂದ ಕಲ್ಮಷವು ಹೋಗುತ್ತದೆ. ಜ್ಞಾನದಿಂದ ಅಮೃತತ್ವವು ಲಭ್ಯ. ವಿದ್ಯೆ ಮತ್ತು ಕರ್ಮಸಾಧನದ್ವಯಸಮುಚ್ಚಯಗಳು.

ಅಂಧಂ ತಮಃ ಪ್ರಕಶಂತಿ
ಯೇಽಸಂಭೂತಿಮುಪಾಸತೇ
ತತೋ ಭೂಯ ಇವತೇ
ತಮೋ ಯ ಉ ಸಂಭೂತ್ಯಾಂ ರತಾಃ

ಯಾರು ಬರಿಯ ವ್ಯಕ್ತ ಸೃಷ್ಟಿಯನ್ನು ಉಪಾಸನೆ ಮಾಡುತ್ತಾರೋ ಅವರು ಅಜ್ಞಾನಾಂಧಃಕಾರಕ್ಕೆ ಹೋಗುತ್ತಾರೆ. ಯಾರು ಅವ್ಯಕ್ತದಲ್ಲಿಯೇ ಮಗ್ನರಾಗುತ್ತಾರೋ ಅವರು ಇನ್ನೂ ಹೆಚ್ಚಿನ ಅಂಧಕಾರದಲ್ಲಿ ತೊಳಲುವವರು.

ಅನ್ಯದೇವಾಹುಃ ಸಂಭವಾದತ್
ಅನ್ಯದಾ ಹುರಸಂಭವಾತ್
ಇತಿ ಶುಶ್ರುಮ ಧೀರಾಣಾಂ
ಯೇ ನಸ್ತದ್ವಿಚ ಚಕ್ಷಿರೇ

ಅವ್ಯಕ್ತದ ಉಪಾಸನೆ ಹಾಗೂ ವ್ಯಕ್ತದ ಉಪಾಸನೆಗಳಿಂದ ಬರುವ ಫಲಗಳು ಬೇರೆ ಬೇರೆ. ಇದು ಪೂರ್ವಾಚಾರ್ಯರ ಮತ. ವೇದಾಂತ ದೇಶಿಕರ ಪ್ರಕಾರ ಸಂಭೂತಿ ಎಂದರೆ ಬ್ರಹ್ಮಪ್ರಾಪ್ತಿಯ ಒಂದು ರೂಪ, ಅಸಂಭೂತಿ ಎಂಬುದು ಪ್ರತಿಬಂಧಗಳ ವಿನಾಶವನ್ನು ಸೂಚಿಸುತ್ತದೆ.

ಸಂಭೂತಿಂ ಚ ವಿನಾಶಂ ಚ
ಯಸ್ತದ್ವೇದೋ ಭಯಂ ಸಹ
ವಿನಾಶೇನ ಮೃತ್ಯುಂ ತೀರ್ತ್ವಾ
ಸಂಭೂತ್ಯಾ ಅಮೃತಮಶ್ನುತೇ

ವಿನಾಶದಿಂದ ಮೃತ್ಯುವನ್ನು ದಾಟಿ ಸಂಭೂತಿಯಿಂದ ಮೋಕ್ಷವನ್ನು ಪಡೆಯುವುದರಿಂದ ಯಾರು ಸಂಭೂತಿ ಮತ್ತು ವಿನಾಶ (ವ್ಯಕ್ತ ಹಾಗೂ ಅವ್ಯಕ್ತ) ಇವೆರಡನ್ನೂ ತಿಳಿದು ಪರಮಾತ್ಮನನ್ನು ಉಪಾಸನೆ



ಮಾಡುವವರು ಮೃತ್ಯುವನ್ನು ದಾಟಿ ಅಮೃತತ್ವವನ್ನು ಪಡೆಯುತ್ತಾರೆ.

ಶ್ರೀ ರಾಮಾನುಜರ ಮತ ಪ್ರಕಾರ ವಿಧ್ಯುಕ್ತವಾದ ಕರ್ಮಗಳನ್ನು ಮನುಷ್ಯ ಮಾಡುವುದರಿಂದ ಪ್ರಾರಬ್ಧ ಕರ್ಮದ ಬಂಧನವನ್ನು ಬಿಡಿಸಿಕೊಂಡು ಪರಮಾತ್ಮೋಪಾಸನ ರೂಪವಾದ ವಿದ್ಯೆಯಿಂದ ಮೋಕ್ಷವನ್ನು ಪಡೆಯಬಹುದು. ಇಲ್ಲಿ ವಿದ್ಯೆ ಅವಿದ್ಯೆ ಎಂಬುವ ಪದಗಳಿಗೆ ಬದಲಾಗಿ ಸಂಭೂತಿ ಅಸಂಭೂತಿ ಅಥವಾ ವಿನಾಶ ಎಂಬುವ ಪದಗಳನ್ನು ಈ ಮಂತ್ರದಲ್ಲಿ ಹೇಳಿವೆ. ಸಂಭೂತಿ ಅಸಂಭೂತಿಗಳಲ್ಲಿ ನಿರತನಾದವನು ತಮಸ್ಸಿನ ಪಾಲಾಗುತ್ತಾನೆ. ಎರಡನ್ನೂ ಒಟ್ಟಿಗೆ ತಿಳಿಯುವವನು ಮೃತ್ಯುವನ್ನು ದಾಟಿ ಅಮೃತತ್ವವನ್ನು ಪಡೆಯುತ್ತಾನೆ.

ಹಿರಣ್ಮಯೇನ ಪಾತ್ರೇಣ
ಸತ್ಯಸ್ಯಾಪಿಹಿತಂ ಮುಖಂ
ತತ್ ತ್ವಂ ಪೂಷನ್ನ ಪಾವೃಣು
ಸತ್ಯಧರ್ಮಾಯ ದೃಷ್ಟಯೇ

ಸತ್ಯವೆಂದರೆ ಜೀವನು. ಅವನ ಮುಖವೆಂದರೆ ಮನಸ್ಸು. ಹಿರಣ್ಮಯ ಪಾತ್ರೆಯಿಂದ ಜೀವನ ಮುಖವು ಮುಚ್ಚಿದೆ ಎಂದರೆ, ಇಹಲೋಕದ ಆಕರ್ಷಣೆಯಿಂದ ಜೀವನಿಗೆ ಪರಮಾತ್ಮನ ಅನುಭವ ಆಗದಂತೆ ಆಗಿದೆ. ಪರಮಾತ್ಮನ ಕೃಪೆಯಿಂದ ಇಹಲೋಕದ ಮೋಹವು ಕಳಚಿಹೋಗಿ ಅವನ ದರ್ಶನವಾಗುತ್ತದೆ. ಮುಂಡಕೋಪನಿಷತ್ತಿನಲ್ಲಿ ಉಕ್ತವಾಗಿರುವ "ಯಮೇವೈಷ ವೃಣುತೇ ತೇನ ಲಭ್ಯಃ" ಮಂತ್ರದ ಪ್ರಕಾರ, ಯಾರಮೇಲೆ ಪರಮಾತ್ಮನ ಕೃಪೆ ಇದೆಯೋ ಅವನಿಗೆ ಅವನು ಲಭ್ಯನು.

ಪೂಷನ್ನೇಕರ್ಷೇ ಯಮ
ಸೂರ್ಯ ಪ್ರಾಜಾಪತ್ಯ
ವ್ಯೂಹ ರಶ್ಮೀನ್ ಸಮೂಹ ತೇಜೋ
ಯತ್ತೇ ರೂಪಂ ಕಲ್ಯಾಣತಮಂ ತತ್ತೇ
ಪಶ್ಯಾಮಿ ಯೋಽಸಾವಸೌ
ಪುರುಷಃ ಸೋಽಹಮಸ್ಮಿ

ಹೇ ಸೂರ್ಯಭಗವಾನ್ ಏಕಾಕಿಯಾಗಿ ಸಂಚರಿಸುವವನೇ ಸರ್ವನಿಯಾಮಕನೇ, ಸೂರ್ಯನೇ, ಪ್ರಜಾಪತಿ ಪುತ್ರನೇ. ನಿನ್ನ ರಶ್ಮಿಗಳನ್ನು ತೆಗೆ ನಿನ್ನ ತೇಜಸ್ಸನ್ನು ಹಿಂತೆಗೆದುಕೋ ನಿನ್ನ ಅತ್ಯಂತ ಶೋಭನವಾದ ರೂಪವು ಯಾವುದೋ ಅದನ್ನು ನಿನ್ನ ಅನುಗ್ರಹದಿಂದ ನೋಡುತ್ತೇನೆ. ಅಲ್ಲಿ ಗೋಚರನಾಗುವ ಆದಿತ್ಯಮಂಡಲ ಮಧ್ಯದಲ್ಲಿರುವ ವ್ಯಾಹೃತಿಗಳೆಂಬ ಅವಯವಗಳಲ್ಲಿ ಪುರುಷನು ಯಾವನೋ ಅವನೇ ನಾನಾಗಿದ್ದೇನೆ. ಈ ಮಂತ್ರದ ಪ್ರಕಾರ ಅಮಿತ ತೇಜಸ್ಸುಳ್ಳ ಸರ್ವಮಂಗಳ ಸ್ವರೂಪನಾದ ಸೂರ್ಯ ಭಗವಾನನನ್ನು ಸಾಧಾರಣವಾಗಿ ನೋಡಲು ಸಾಧ್ಯವಿಲ್ಲ. ಆ ಅಮಿತ ತೇಜಸ್ಸನ್ನು ತೆಗೆದು ಪರಮಾತ್ಮನನ್ನು ನೋಡುವ ಅವಕಾಶಮಾಡಿಕೊಡು ಎಂಬುವುದಾಗಿ ಈ ಮಂತ್ರದ ಅರ್ಥ. ಜೀವ-- ಪರಮಾತ್ಮರೂ ಒಂದೇ ಎಂಬುವ ಅರ್ಥವೂ ಈ ಮಂತ್ರದಲ್ಲಿ ಬರುತ್ತದೆ.

ವಾಯುಃ ಅನಿಲಂ ಅಮೃತ--
ಮಥೇದಂ ಭಸ್ಮಾಂತಂ ಶರೀರಮ್
ಓಂ ಕ್ರತೋ ಸ್ಮರ ಕೃತಂ ಸ್ಮರ
ಕ್ರತೋ ಸ್ಮರ ಕೃತಂ ಸ್ಮರ

ಪ್ರಾಣವಾಯುವು ಸ್ವತಂತ್ರವೂ ಅಮೃತಮಯವೂ ಆಗಿದೆ. ಈ ಶರೀರವು ಭಸ್ಮವಾಗಿ ನಾಶಹೊಂದು ತಕ್ಕದ್ದು. ಹೇ ಸಂಕಲ್ಪ ಶಕ್ತಿಯೇ ಸ್ಮರಿಸು ನಿನ್ನ ಕೃತ ಕರ್ಮವನ್ನು ಸ್ಮರಿಸು ಓಂ ಕ್ರತುವೇ ನಿನ್ನ ಪೂರ್ವಕರ್ಮಗಳನ್ನು ಸ್ಮರಿಸು. ಈ ಮಂತ್ರದ ಅರ್ಥ ಅವಸಾನಕಾಲದಲ್ಲಿ ಭಗವಂತನನ್ನು ಸ್ಮರಿಸು ಏಕೆಂದರೆ ಅಂತ್ಯಕಾಲದಲ್ಲಿ ಯಾರು ಯಾವ ಯಾವ ಭಾವದಿಂದ ದೇಹತ್ಯಾಗ ಮಾಡುತ್ತಾರೋ ಅವರು ಆ ಭಾವವನ್ನೇ ಹೊಂದುವರು ಎಂಬುವುದು ಗೀತೆಯ ಪಾಠ. ಸ್ನೇಹ ಪೂರ್ಣೇನ ಮನಸಾ ಯತ್ತ್ವಂ ಸ್ಮರಸಿ ಕೇಶವ ಈ ಕೊನೆಯ ಮಂತ್ರ ಪರಮಾತ್ಮನನ್ನು ಸ್ತುತಿಸುವ ಮಂತ್ರ--

ಅಗ್ನೇ ನಯ ಸುಪಥಾರಾಯೇ ಅಸ್ಮಾನ್
ವಿಶ್ವಾನಿ ದೇವ ವಯುನಾನಿ ವಿದ್ವಾನ್
ಯುಯೋಽಧ್ಯಸ್ಮಜ್ಜುಹುರಾಣ ಮೇನೋ
ಭೂಮಿಷ್ಠಾಂ ತೇ ನಮ ಉಕ್ತಿಂ ವಿಧೇಮ

ಸರ್ವೇಶನಾದ ಅಗ್ನಿಯೇ ಕರ್ಮ ಫಲದ ಪ್ರಾಪ್ತಿಗಾಗಿ ನಮ್ಮನ್ನು ಸನ್ಮಾರ್ಗದಲ್ಲಿ ನಡೆಸು, ಹೇ ದೇವ ದೇವ ನೀನು ಕರ್ಮಫಲಗಳಜ್ಞಾನಿ, ನಮ್ಮ ಹೀನ ಪಾಪಗಳನ್ನು ಹೋಗಲಾಡಿಸು, ನಿನಗೆ ಪುನಃ ಪುನಃ ನಮಸ್ಕಾರಗಳು.

ಈಶಾವಾಸ್ಯೋಪನಿಷತ್ ಸಾರಾಂಶ, ವಿಶ್ವವು ಈಶನಿಂದ ವ್ಯಾಪ್ತವಾಗಿದೆ. ಕರ್ತವ್ಯ ಪರಾಯಣರಾಗಿ ನೂರು ವರ್ಷ ನಾವು ಬಾಳಬೇಕು. ಎಲ್ಲವೂ ಈಶ್ವರನ ಸ್ವತ್ತುಗಳು. ಎಲ್ಲಾ ದುಃಖಕ್ಕೆ ಮೂಲ ಅಜ್ಞಾನ. ಇಂದ್ರಿಯಾತೀತನಾದ ಅಗೋಚರನಾದ ಪರಮಾತ್ಮ ಜ್ಞಾನವೇ ಸುಲಭೋಪಾಯ. ಬರಿಯ ವ್ಯಕ್ತ ಜ್ಞಾನ ಉಪಾಸನೆ ಮೋಕ್ಷವನ್ನು ನೀಡಲಾರದು. ಅವ್ಯಕ್ತವೂ ಅಷ್ಟೇ ಅದೇ ಯೋಗಶಕ್ತಿ. ವ್ಯಕ್ತ ಅವ್ಯಕ್ತಗಳಾಚೆ ಇರುವ ಪರಮಾತ್ಮನ ಜ್ಞಾನವೇ ನಿಜವಾದ ಮೋಕ್ಷ, ಕ್ಷರ ಅಕ್ಷರ ವ್ಯಕ್ತಾವ್ಯಕ್ತಗಳ ಜ್ಞಾನವೇ ಶ್ರೇಷ್ಠಕರವಾದುದು. ದೇಹಾತ್ಮಭಾವವುನಷ್ಟವಾಗಿ ಜ್ಞಾನಾಗ್ನಿಯಿಂದ ದಗ್ಧವಾದ ಕರ್ಮವು ಉಪಾಸನೆಯಿಂದ ಅಂತ ಜ್ಯೋತಿಯನ್ನು ಕಾಣುವಂತೆ ಮಾಡುತ್ತದೆ. ನಾವು ಪುನಃ ಪುನಃ ಆ ಪರಮಾತ್ಮನನ್ನು ನಮಸ್ಕಾರ ಮಾಡಬೇಕು. ಯೋಗದಿಂದ ಧ್ಯಾನಾದಿ ಮಾನಸಿಕ ಅಭ್ಯಾಸಗಳಿಂದ ಪರಮಾತ್ಮನನ್ನು ಎಲ್ಲರೂ ಪಡೆದು ನೂರು ವರ್ಷ ಸಾರ್ಥಕ ಜೀವನ ಪಡೆದು ಮೋಕ್ಷವನ್ನು ಹೊಂದಬಹುದು. ♣

# ಆಳ್ವಾರರ ದಾಸಭಾವ

ಭಕ್ತಿ ಎನ್ನುವುದು ಪರಮಾತ್ಮನಲ್ಲಿ ಪರಮ ಪ್ರೇಮ ರೂಪವಾದದ್ದು. ಅಮೃತ ಸ್ವರೂಪವಾದದ್ದು. ಇದು ಅತಿಯಾದಾಗ ದಾಸಭಾವತ್ವ ಏರ್ಪಡುವುದು. ಆಳ್ವಾರಾದಿಗಳು ಹನ್ನೆರಡು ಜನ. ಶ್ರೀ ವೈಷ್ಣವ ಸಿದ್ಧಾಂತದ ಮೂಲಪುರುಷರು. ಇವರು ತಮ್ಮ ದಾಸಭಾವತ್ವವನ್ನು ಹಲವು ವಿಧಗಳಲ್ಲಿ ಪ್ರಕಟಿಸಿ ಭಗವದನುಭವದಲ್ಲಿ ಆಳವಾಗಿ ಮುಳುಗಿ ಅದರಿಂದುಂಟಾದ ಆನಂದವನ್ನು ಮಧುರವಾದ ಗೀತ ರೂಪದಲ್ಲಿ ಹಾಡಿದರು. ಭಗವಂತನ ಚರಣಾರವಿಂದದ ಭಕ್ತಿಯೊಂದು ಮಾತ್ರ ಯಾವಾಗಲೂ ನೆಲೆಗೊಂಡಿರಬೇಕೆಂಬುದೇ ದಾಸಾನುದಾಸರಾಗಿ ಬಾಳಿದ ಇವರ ಧ್ಯೇಯವಾಗಿತ್ತು.

ಮೊದಲಿನ ಮೂವರು ಆಳ್ವಾರರುಗಳಾದ ಪೊಯ್‌ಗ್ಯೆಯಾಳ್ವಾರರು, ಪೂದತ್ತಾಳ್ವಾರರು, ಪೇಯಾಳ್ವಾರರು ಅಯೋನಿಜರೆಂದು ಪ್ರತೀತಿ. ಹುಟ್ಟುತ್ತಲೇ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಪಡೆದವರು. ಒಮ್ಮೆಭೀಕರವಾದ ಮಳೆಗೆ ಸಿಕ್ಕಿಮೂವರೂ ಒಂದೆಡೆ ಸೇರುವ ಹಾಗಾಯಿತು. ಆಗ ಒಬ್ಬರಿಗೊಬ್ಬರು ಹೇಗೆ ಪರಿಚಯಿಸಿಕೊಂಡರು? ಒಬ್ಬರು "ನಾನು ಭಗವಚ್ಛೇಷ ಭೂತನು" ಎಂದರು. ಇನ್ನೊಬ್ಬರು 'ನಾನು ವಾಸುದೇವನ ದಾಸ' ಎಂದರು. ಮೂರನೆಯವರು ಹೇಳಿದರು -- 'ನಾನು ಕೋಸಲೇಂದ್ರನ ದಾಸ'. ಆ ಇಕ್ಕಟ್ಟಾದ ಜಾಗದಲ್ಲಿ ಕತ್ತಲಲ್ಲಿ ಪರಮಾತ್ಮನೂ ಇವರೊಡನೆ ಸೇರಿ, ಅವರಿಗೆ ತನ್ನ ನಿಕಟ ಸ್ಪರ್ಶದ ಅನುಭವವನ್ನು ನೀಡಿದಾಗ ಆ ಮೂವರು ಮಹನೀಯರೂ ಆನಂದದಲ್ಲಿ "ತಿರುವಂದಾದಿ" ಎಂಬ ಮುನ್ನೂರು ಪಾಶುರಗಳ ಸ್ತೋತ್ರರತ್ನಗಳನ್ನು ಹಾಡಿದರು. ಇವರು ಹರಿದಾಸ ಶ್ರೇಷ್ಠರು.

ಸಮರ್ಥ ರಾಜರು ಮಾತ್ರವಲ್ಲದೆ ಸದಾ ಪರಮಾರ್ಥಿಕ ಚಿಂತನೆಯಲ್ಲೇ ತೊಡಗಿದ್ದು ಭಕ್ತಿಮಾರ್ಗದಲ್ಲಿ ನಡೆದವರು ಕುಲಶೇಖರಾಳ್ವಾರರು. ಅವರು ತಿರುವಾಂಕೂರಿನ ರಾಜರಾಗಿದ್ದವರು. ಭಕ್ತಿಗೆ ತಕ್ಕ ಜ್ಞಾನ, ಜ್ಞಾನಕ್ಕೆತಕ್ಕ ವೈರಾಗ್ಯ ಅವರಲ್ಲಿ ಮೂಡಿದ್ದವು. ಅವರ ವಿರಕ್ತಿ ಭಾವವು ದಿನೇ ದಿನೇ ಹೆಚ್ಚುತ್ತ ಬಂದು ಕೊನೆಗೆ ಅವರು ಯೋಗಜೀವನವನ್ನು ಹಿಡಿದರು. ಶ್ರೀಮನ್ ನಾರಾಯಣನಿಗೆ 'ಅನ್ಯಥಾ ಶರಣಂ ನಾಸ್ತಿ, ತ್ವಮೇವ ಶರಣಂ ಮಮ." ಎಂದು ಮೊರೆಹೊಕ್ಕರು. ಅವರ ಭಕ್ತಿ ಪರವಶತೆ, ದಾಸಭಾವತ್ವ, ಸೇವಾ ಮನೋಭಾವ ಎಷ್ಟಿತ್ತೆಂದರೆ ಅವರು ತಿರುವೇಂಗಡನ ಸನ್ನಿಧಾನದಲ್ಲಿ ಕಾಡು ಮೋಳೆಯಾಗಬಯಸಿದವರು. ದಾಸ ಭಾವತ್ವದಿಂದ ತಾಯಿಯೊಡನೆ ಧಾವಿಸುವ ಮಗುವಿನಂತೆ ಅವನನ್ನು ಅನುಸರಿಸಿದರು. ಪತಿಯೇ ಪರದೈವವೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಬಾಳುವ ಪತಿವ್ರತಾಸ್ತ್ರೀಯಂತೆ ಶ್ರೀಮನ್ನಾರಾಯಣನೇ ತನ್ನ ಪ್ರೀತಿಯೊಡೆಯನು ಎಂದು ಬಾಳಿದರು. ಅವರು ಅವನ ಮಾಯೆಯಿಂದಾಗಿ ದೀರ್ಘಕಾಲ ದುಃಖಕ್ಕೊಳಗಾದರೂ ಆ ದೇವಾದಿದೇವನ ಅಡಿಯಾಳಾಗಿರಲು ಬಯಸಿ, ಅವನ ಸೇವೆಗಾಗಿಯೇ ಕಾದು, ಅವನ ಕೃಪೆಯನ್ನೇ ಎದುರು ನೋಡಿದವರು. ಮಳೆಗಾಗಿ ಎದುರು ನೋಡುತ್ತಾ ನಿಲ್ಲುವ ಪೈರಿನಂತೆ ತಮ್ಮ ಮನಸ್ಸನ್ನು ಅವನ ಕಡೆಗೇ ತಿರುಗಿಸಿದವರು. ನದಿ ಎಲ್ಲೆಡೆಗಳಲ್ಲೂ ಸುತ್ತಾಡಿ ಕೊನೆಗೆ ಸಮುದ್ರ ಸೇರುವ ಹಾಗೆ ಅವರು ತಿರುವೇಂಗಡನನ್ನು ಸೇರುವುದರಲ್ಲೇ ಆನಂದ ಕಂಡವರು. ಈ ಮಹಾತ್ಮರು ಹಾಡಿದ ಮುಕುಂದಮಾಲಾ ಸ್ತೋತ್ರಗಳಲ್ಲಿ ಬರುವ ಒಂದು ಶ್ಲೋಕ ಹೀಗಿದೆ:

"ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ
ತತ್ಪ್ರಾರ್ಥನೀಯ ಮದನುಗ್ರಹ ಏಷ ಏವ
ತದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ ಭೃತ್ಯಸ್ಯ
ಭೃತ್ಯ ಇತಿಮಾಂ ಸ್ಮರ ಲೋಕನಾಥಾ."



ಎಂಬ ಈ ಶ್ಲೋಕವು ಅವರ ಆತ್ಮಸಮರ್ಪಣಾ ಭಾವವನ್ನು ತೋರಿಸುತ್ತದೆ. ಲೋಕಬಂಧುವಾದ ಭಗವಂತನ ದಾಸಾನುದಾಸನು ತಾನು ಎಂಬುದಾಗಿ ಅವನು ತನ್ನನ್ನು ವರ್ಣಿಸಿದರೂ ಸಾಕು ಅದೇ ತನಗೆ ಬೇಕಾದ ಪುರುಷಾರ್ಥ ಎಂದು ಬೇಡಿಕೊಂಡರು. ತಮ್ಮ ಜನ್ಮಕ್ಕೆ ಅದಕ್ಕಿಂತಲೂ ಹೆಚ್ಚು ಫಲವು ಅವಶ್ಯವಿಲ್ಲವೆಂಬುದಾಗಿ ಕೈಯೆತ್ತಿ ಪ್ರಾರ್ಥಿಸಿಕೊಂಡರು. ಅಷ್ಟು ಕರುಣೆ ಈ ದಾಸನಮೇಲೆ ಇದ್ದರೆ ಸಾಕೆಂದರು.

ಪೆರಿಯಾಳ್ವಾರರ ದಾಸಭಾವತ್ವವೂ ಇದೇ ತೆರನಾದದ್ದು. ಅವರು ದೇವರಿಗೆ "ಪಲ್ಲಾಂಡು ಪಲ್ಲಾಂಡು..... ತಿಂಡೋಳ್‌ಮಣಿವಣ್ಣಾ" ಎಂದು ಹಾರೈಸಿದವರು. ತಮ್ಮ ಒಂದು ಪಾಶುರದಲ್ಲಿ ಅವರು ಹೀಗೆಂದರು. "ಎಂದು ನನ್ನೊಡೆಯಾ ನಿನಗೆ ಅಡಿಯಾಳುಗಳೆಂದು ನಾವಂದು ಬರಕೊಂಡೆವೋ, ಅಂದೇ ಮುಕ್ತಿಯಾಯಿತು. ಈ ಸೇವಕರ ಕುಲವೇ ಉಜ್ಜೀವಿಸಿತು, ನಿಶ್ಚಯ". ಮುಕ್ತಿಗೂ, ಭಕ್ತಿಗೂ, ಭಗವಂತನ ಕೈಂಕರ್ಯಕ್ಕೂ ದಾಸಭಾವತ್ವ ಒಂದು ಕೊಂಡಿ ಎಂಬುದನ್ನು ತೋರಿಸಿದರು.

ಅವರ ಆಶ್ರಯದಲ್ಲೇ ಬೆಳೆದ, ಶೂಡಿ ಕೊಡುತ್ತ ಶುಡಕ್ಕೊಡಿಯಾದ ಆಂಡಾಳ್ ತಾಯಾರ್ ಅವರಂತೂ ಶ್ರೀ ಕೃಷ್ಣನಲ್ಲಿ ಅಪರಿಮಿತಿ ಪ್ರೇಮವನ್ನು ಪ್ರಕಟಿಸಿ ಶ್ರೀರಂಗನಾಥರಲ್ಲಿ ಅನನ್ಯ ಭಕ್ತಿ ಭಾವವನ್ನಿಟ್ಟುಕೊಂಡು ತಮ್ಮ ಜೀವನವನ್ನು ಅವನಿಗೇ ಮುಡಿಪಾಗಿಟ್ಟರು. ತಮ್ಮ ಪಾಶುರವೊಂದರಲ್ಲಿ ಅವರು ಶ್ರೀಕೃಷ್ಣನ ಸನ್ನಿಧಿಗೆ ಬಂದು ಬಾಗಿಲಲ್ಲಿ ನಿಂತು ಪ್ರೇಮಭಿಕ್ಷೆ ಬೇಡುತ್ತ ಒಂದೆಡೆ ಹೇಳುತ್ತಾರೆ. "ಸೇವಕರಾದ ನಮ್ಮನ್ನು ಅಂಗೀಕರಿಸದೆ ಹೋಗಲಾಗದು. ಸುಮ್ಮನೆ ಕೂಗಾಡಿ ಹೋಗುವವರಲ್ಲ ನಾವು ಗೋವಿಂದಾ ಇನ್ನೆಲ್ಲ ಕಾಲಕ್ಕೂ ಏಳೇಳು ಜನ್ಮಕ್ಕೂ ನಿನ್ನ ಒಳಪಟ್ಟವರಾಗಿರತಕ್ಕವರು ನಾವು, ನಿನಗೇ ನಾವು ಆಳಾಗಿ ಇರತಕ್ಕವರು. ಮತ್ತೇನಾದರೂ ಕಾಮನೆಗಳಿದ್ದರೆ ಅವುನಶಿಸಲಿ" ಎಂದು ತಮ್ಮ ದಾಸಭಾವತ್ವವನ್ನು ಅತಿ ಉತ್ಕಟತೆಯಿಂದ ಪ್ರಕಟಿಸಿದರು.

ಪೆರಿಯಾಳ್ವಾರರು ಹೇಗೆ ಶ್ರೀರಂಗನಾಥನಲ್ಲಿ ಅನನ್ಯ ಭಕ್ತಿ ಹೊಂದಿದ್ದರೋ ಹಾಗೆಯೇ ತೊಂಡರಡಿಪ್ಪೊಡಿಯಾಳ್ವಾರರೂ ತಮ್ಮ ನೈಷ್ಠಿಕ ಜೀವನವನ್ನು ನಡೆಸಿದರು. ಅವರು ಶ್ರೀರಂಗದ ಸಮೀಪದಲ್ಲಿದ್ದು

ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ/ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

**ಸಪ್ತಗಿರಿ**

ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ.** **ಕೊಂಡು ಓದಿಸಿರಿ.**

ಕೊಂಡು ಹೂದೋಟವೊಂದನ್ನು ಮಾಡಿಕೊಂಡು ಮದುವೆಯಾಗದೆ, ನೈಷ್ಠಿಕ ಬ್ರಹ್ಮಚರ್ಯೆಯಲ್ಲಿದ್ದು ಶ್ರೀರಂಗನಾಥ ಸೇವೆ ಮಾಡಿಕೊಂಡಿದ್ದರು. ಅಂಥವರು ಕೂಡ ವಿಧಿಯ ಆಟಕ್ಕೆ ಒಳಗಾಗಬೇಕಾಯಿತು. ವಿಧಿವಶಾತ್ ದೇವದೇವಿಯೆಂಬ ವೈಶ್ಯೆಯು ಅವರ ಪ್ರೇಮವನ್ನು ಸೂರೆಗೊಂಡಳು. ಇದರಿಂದಾಗಿ ಅವರು ಲೋಕನಿಂದೆ, ಅಪವಾದಗಳನ್ನು ಭರಿಸಬೇಕಾಯಿತು. ಕೊನೆಗೆ ಪಶ್ಚಾತ್ತಾಪದಿಂದ ಬೆಂದು ಮತ್ತೆ ತಮ್ಮ ವಾರಾಗ್ಯ ಜೀವನವನ್ನು ಕಂಡುಕೊಂಡರು. ದೇವದೇವಿಯಲ್ಲಿ ದಾಸರಾಗಿದ್ದುದಕ್ಕಾಗಿ ಮನ ನೊಂದು ಅವರು ಮತ್ತೆ ಭಕ್ತರ, ಭಾಗವತರ ದಾಸರಾದರು. ಇದರಿಂದಾಗಿ ಇವರ ಹೆಸರು ಭಕ್ತಾಂಘ್ರಿರೇಣು ಎಂದಾಯಿತು. ಇವರ ಮಾರ್ಗದಲ್ಲೇ ನಡೆದು ದೇವದೇವಿಯೂ ತನ್ನ ಸರ್ವಸ್ವವನ್ನೂ ಶ್ರೀರಂಗನಾಥನಿಗೆ ಸಮರ್ಪಿಸಿ ಸನ್ಯಾಸಿನಿಯಾದಳು.

ಭಗವಂತನು ತನ್ನ ನಿಜವಾದ ಭಕ್ತರಿಗೆ ಎಷ್ಟು ಸುಲಭನು ಎಂಬುದನ್ನು ತಿರುಪ್ಪಾಣಾಳ್ವಾರರ ದಿವ್ಯ ಜೀವನದಿಂದ ಅರಿತುಕೊಳ್ಳಬಹುದು. ಈಶ ಸಾಕ್ಷಾತ್ಕಾರದ ಸವಿಯುಂಡ ಈ ಪಂಚಮರನ್ನು ಹೆಗಲ ಮೇಲೆ ಹೊತ್ತುಕೊಂಡು ಬಂದು ತನ್ನ ಸೇವೆ ಮಾಡಿಸಬೇಕೆಂದು ಭಗವಂತನು ಆಜ್ಞೆ ಮಾಡಿರಬೇಕಾದರೆ ಆತನ ಭಕ್ತಿ ಎಷ್ಟು ಉಚ್ಚಮಟ್ಟದ್ದಿರಬೇಕು! ಭಗವಂತ ಮಾಡಿದ ಆಜ್ಞೆಯ ಪ್ರಕಾರ ಬ್ರಾಹ್ಮಣರಾದ ಲೋಕಸಾರಂಗರು ತಿರುಪ್ಪಾಣಾಳ್ವಾರರನ್ನು ಶ್ರೀರಂಗನಾಥರ ದಿವ್ಯ ಸನ್ನಿಧಿಗೆ ಹೊತ್ತುಕೊಂಡು ಬಂದಾಗ, ಇವರು ಭಗವಂತನನ್ನು ಹಾಡಿ ಹೊಗಳುತ್ತಲೇ ಅವನನ್ನು ಸೇರಿಬಿಟ್ಟರು. ಭಗವಂತನು ಲೋಕಸಾರಂಗರ ಕನಸಿನಲ್ಲಿ ಬಂದು ಆಜ್ಞೆಮಾಡಿದ್ದಾದರೂ ಏನು? "ತಿರುಪ್ಪಾಣನು ನನಗೆ ಅತ್ಯಂತ ಪ್ರಿಯನು, ನನ್ನ ಸ್ನೇಹಿತ, ನನ್ನ ದಾಸ" ಎಂದು. ಲೋಕಸಾರಂಗರಿಂದ ತಿರುಪ್ಪಾಣರಿಗೆ ಅಪಚಾರವಾಗಿತ್ತು. ಅದಕ್ಕಾಗಿ ಲೋಕಸಾರಂಗರು ಅವರ ಬಳಿಗೆ ಬಂದು ತಾವು ಎಸಗಿದ ಅಪಚಾರಕ್ಕಾಗಿ ಕ್ಷಮಾಪಣೆ ಕೇಳಿ ಅವರಿಗೆ ಭಗವಂತನು ಅವರನ್ನು ಕರೆದುಕೊಂಡು ಬರಲು ಹೇಳಿದ್ದನ್ನು ತಿಳಿಸಿದ್ದಾರೆ. ತಾವು ಈಶನ ಆಜ್ಞೆಗೆ ಬದ್ಧರು ಎಂದು ವಿನಂತಿಸಿಕೊಂಡಿದ್ದಾರೆ. ಅಂತ್ಯಜರಾದ ತಿರುಪ್ಪಾಣಾಳ್ವಾರರಿಗೆ ಅಂಜಿಕೆ "ರಂಗನಾಥನ ಪವಿತ್ರ ಕ್ಷೇತ್ರದಲ್ಲಿ ಕಾಲಿಡಲು ತಾವು ಯೋಗ್ಯರಲ್ಲ" ಎಂದು ಹೆದರಿದ ಅವರನ್ನು ಲೋಕಸಾರಂಗರು ರಂಗನಾಥನ ಕಟ್ಟಪ್ಪಣೆಯಂತೆ ಹೆಗಲಮೇಲೇರಿಸಿಕೊಂಡು ಭಗವಂತನ ದರ್ಶನಕ್ಕೆ ಕರೆದೊಯ್ದರು. ತಾವೆಂದೂ ಕಣ್ಣಾರೆ ಕಾಣಲು ಅಸಾಧ್ಯನಾದ ಭಗವಂತನನ್ನು ತಮ್ಮ ಕಣ್ಣು

ಂದನೋಡಿದಾಗ ತಿರುಪ್ಪಾಣಾಳ್ವಾರರು ಮೈಮ ) ಹಾಡುತ್ತ (ಅಮಲನಾದಿ ಪಿರಾನ್ ಎಂಬ ತ್ತು ಪಾಶುರಗಳು) ದೇವರಲ್ಲಿ ಐಕ್ಯರಾದರು.

ತಿರುಮಂಗೈ ಆಳ್ವಾರರಂತೂ ದಾಸಭಾವತ್ವದಲ್ಲಿ ಗಣ್ಯರು. ದೇವರ ಸೇವೆಯು ನಿರರ್ಗಳವಾಗಿ ಸುವುದಕ್ಕಾಗಿ ದರೋಡೆಗೂ ಕೈಹಾಕಿದ ಸಾಹಸಿ ). ಇವರು ಪೂರ್ವಾಶ್ರಮದಲ್ಲಿ ಬೇಡರಪಡೆಯ ಯಕನಾಗಿದ್ದು ಅತಿಶಯ ಸಾಹಸಗಳನ್ನೆಸಗಿದ ). ಕುಮುದವಲ್ಲಿಯನ್ನು ವರಿಸುವ ಸಲುವಾಗಿ ವೈಷ್ಣವ ದೀಕ್ಷೆಯನ್ನು ಕೈಗೊಂಡು ಶ್ರೀ ವೈಷ್ಣವರ ವೆಯನ್ನು ಕೈಗೊಂಡವರು. ತಮ್ಮ ಸೇವೆಯಲ್ಲಿ ಲೋಪ ಬರಬಾರದೆಂಬುದಕ್ಕಾಗಿ ಚೋರವೃತ್ತಿಗೆ ದ ಇವರನ್ನು ಶ್ರೀಮನ್ನಾರಾಯಣನೇ ಲಕ್ಷ್ಮೀ ಸಮೇತನಾಗಿ ಬಂದು ಪರೀಕ್ಷಿಸಿ ವಶಪಡಿಸಿಕೊಂ ). ಕಸದಲ್ಲಿ ರತ್ನ ಸಿಕ್ಕಿದಂತೆ ಪಾಪಿ ಜೀವನದಿಂದ ಪವಿತ್ರತೆಯ ಜೀವನ ಹುಟ್ಟುವುದು ಎಂಬುದು ಗವತದ ನಂಬಿಕೆ. ಹಾಗೆಯೇ ತಿರುಮಂಗೈ ಳ್ವಾರರ ಆತ್ಮದಮೊಗ್ಗು ಅರಳಿ ಹೂವಾಯಿತು. ಗವಂತನ ಆಭರಣಗಳನ್ನು ಅಪಹರಿಸಲು ಬಂದವರಿಗೆ ಭಗವಂತನ ಸಾಕ್ಷಾತ್ಕಾರವಾಯಿತು. ವರ ಹೃದಯ ಪರಿತಾಪದಿಂದ ತಲ್ಲಣಿಸಿತು. ಕ್ಷಣ ಮಾತ್ರದಲ್ಲೇ ತಮ್ಮ ಹೃದಯವನ್ನು ಶೋಧನ ಮಾಡಿ ಕೊಂಡರು. ಪರಮಾತ್ಮನಲ್ಲಿ ಸರ್ವಾರ್ಪಣಮಾಡಿ ವನ ಕೈಂಕರ್ಯಕ್ಕೆ ಜೀವನವನ್ನು ಮುಡುಪಾಗಿಟ್ಟು ಟ್ಟರು. ಪ್ರಪಂಚದ ಭೋಗೈಶ್ವರ್ಯಗಳು ಹುಲ್ಲಿ ಗಿಂತಲೂ ಕಡೆಯಾದವು, ಭಗವದನುರಾಗಕ್ಕೆ ಸರಿಗ ಟ್ಟುವ ಆನಂದ ಬೇರೆಯಾವುದೂ ಇಲ್ಲವೆಂದು ಮನ ಡರು. "ನನ್ನ ನಾಲಿಗೆಯಿಂದ ಬದುಕಿಕೊಳ್ಳು ವುದಕ್ಕೆ -- ಕಂಡುಕೊಂಡೆನು ನಾನು ನಾರಾಯಣಾ ಎಂಬ ಹೆಸರನ್ನು" ಎಂದು ಹಾಡಿದರು. "ಒಳ್ಳೆಯ ನಗೆ ಬಾಳಿಸುವ ದಾರಿಯನ್ನು ಹಿಡಿದು" ದಾಸ ಭಾವದಲ್ಲಿ ಮೋಕ್ಷವನ್ನು ಸಾಧಿಸಿದರು. ಮತ್ತೆ ಮತ್ತೆ ತಮ್ಮ ಪಾಶುರಗಳಲ್ಲಿ "ಕರುಣಾಮಯಿಯಾದ ನು ನೀನು. ಅಂತಹ ದೇವನ ಅಡಿಗಳಲ್ಲಿ ದಾಸನು ನು, ನೋವಿನಲ್ಲಿ ನಿನ್ನನ್ನು ನೆನೆದಾಗ ಸಡಗರ ದ ಓಡಿಬಂದ ಲೋಕದೊಡೆಯ ನೀನು, ನಿನ್ನಡಿ ಗಳಲ್ಲಿ ನಾನು ಶರಣು" ಎಂದೆಲ್ಲ ಹೇಳಿ ತಮ್ಮ ದಾಸ ಭಾವವನ್ನು ಪ್ರಕಟಿಸಿದರು.

"ದೇವ ! ನಿನ್ನ ಪೊನ್ನಡಿಗಳಲ್ಲದೆ ನನಗಿನ್ನೇನು ಟ್ಟು?" ಎಂದರು ತಿರುಮಳಿಶೈ ಆಳ್ವಾರರು ! ವರು ಬೇಡನೊರ್ವನ ಮನೆಯಲ್ಲಿ ಬೆಳೆದವರು. ವರು ಒಂದೆಡೆ ಹೇಳಿದ್ದಾರೆ-- "ನಾನು ದ್ವಿಜ ಲ್ಲಿ ಹುಟ್ಟಲಿಲ್ಲ; ನನಗೆ ಚತುರ್ವೇದಗಳ ಅರಿ ವಿಲ್ಲ; ಇಂದ್ರಿಯ ನಿಗ್ರಹವೆಂಬುದೇನೋ ನಾನ ರಿಯೆ; ನನಗೆ ತಿಳಿದಿರುವುದೊಂದೇ ಶ್ರೀಹರಿಯ ಪಾದಪದ್ಮಗಳು" ಎಂದು. ಅವರ ಭಕ್ತಿಯು ದಾಸ ಭಾವದೊಡನೆ ಎಷ್ಟು ದೂರ ಬೆರೆತಿತ್ತೆಂದರೆ ಭಗ ವಂತನ ಕೃಪೆಗೆ ತಾನು ಎಂದೆಂದಿಗೂ ಪಾತ್ರನೆಂಬು ದನ್ನು ಈ ರೀತಿ ಹೇಳಿದರು. "ಇಂದೋ ನಾಳೆಯೋ ಇಲ್ಲ ಇನ್ನುಮುಂದೆಯೋ ನಿನ್ನ ಕೃಪೆಗೆ ನಾನು ಪಾತ್ರ ನಾಗುವುದು ನಿಜ. ಓ ನಾರಾಯಣ! ನಾನು ನೀನಿ ಲ್ಲದೇ ಇಲ್ಲ, ನೀನು ನಾನಿಲ್ಲದೆ ಇಲ್ಲ ಕಂಡೆಯಾ?" ಭಕ್ತಿ ಭಾವನೆ ತತ್ವಚಿಂತನೆಗಳೆರಡನ್ನೂ ಮೇಳವಿಸಿ ದಾಸ ರಾಗಿ ಬಾಳಿದ ಮಹಾನ್ ಚಿಂತಕರು ಅವರು.

ಮಧುರ ಕವಿಯಾಳ್ವಾರರು ಬ್ರಾಹ್ಮಣರಾದರೂ ವೆಳ್ಳಾಳವಂಶಕ್ಕೆ ಸೇರಿದ ನಮ್ಮಾಳ್ವಾರರನ್ನು ತಮ್ಮ ಪರಮಾಚಾರ್ಯರನ್ನಾಗಿ ಅಂಗೀಕರಿಸಿದರು. "ಆಚಾರ್ಯ ದೇವೋಭವ" ಎಂಬುವನ್ನು ಅಕ್ಷ ರಶಃ ತಮ್ಮ ಆಚಾರ್ಯ ನಿಷ್ಠೆಯಲ್ಲಿ ತೋರಿಸಿ ದರು. ಕುಲಕ್ಕಿಂತಲೂ ಗುಣಕ್ಕೆ ಕೊಟ್ಟ ಹಿರಿಮೆ ಏನೆಂಬುದು ಇವರ ಜೀವನದಿಂದ ವ್ಯಕ್ತವಾಗು ವುದು. ಅವರು ನಮ್ಮಾಳ್ವಾರರಿಂದ ಅನುಗ್ರಹೀತ ರಾಗಿ ಅವರ ಪರಮ ಭೃತ್ಯರಾದರು. ತಮ್ಮ ಆ ದಾಸ್ಯ ತ್ವದಿಂದ ಆಚಾರ್ಯನ ಮೂಲಕ ಶಿಷ್ಯನು ಹೇಗೆ ಪರ ಮಾತ್ಮನ ಸನ್ನಿಧಾನವನ್ನು ಪಡೆಯಬಹುದು ಎಂಬು ದನ್ನು ತೋರಿಸಿಕೊಟ್ಟರು. ನಮ್ಮಾಳ್ವಾರರಿಗೆ ಅವರ ತಪಸ್ಸಿನ ಫಲವಾಗಿ ಭಗವಂತನ ಅನುಗ್ರಹವಾಗಿ ಅವನನ್ನು ಸಾಕ್ಷಾತ್ಕರಿಸಿಕೊಂಡರು. ಅವರು ಭಗ ವಂತನನ್ನು ಪ್ರಿಯನೆಂದು ಭಾವಿಸಿ ಪ್ರೇಯಸಿಯ ಭಾವವನ್ನು ಒಳಗೊಂಡು ತಮಗೂ ಭಗವಂತ ನಿಗೂ ಇದ್ದ ಅಂತರಂಗ ಪ್ರೇಮವನ್ನು ತಮ್ಮ ಪಾಶು ರಗಳಲ್ಲಿ ವ್ಯಕ್ತಪಡಿಸಿದರು. ಜಾತಿಯಲ್ಲಿ ಎಷ್ಟು ನಿಕೃ ಷ್ಟರಾದರೂ ಎಷ್ಟು ಜ್ಞಾನಹೀನರಾದರೂ ಭಗವಂ ತನ ಭಕ್ತರಾಗಿದ್ದರೆ ಅಂಥಹವರ ದಾಸರ ದಾಸನಾ ಗಲು ತಾನು ಸಿದ್ಧರಿರುವೆಂಬುದನ್ನು ಒಂದು ಪಾಶು ರದಲ್ಲಿ ಹೇಳಿಕೊಂಡಿದ್ದಾರೆ. "ಕುಲಗಳ ನೆಲೆ ಎನಿ ಸಿದ ಜಾತಿಗಳು ನಾಲ್ಕಕ್ಕೂ ಕೆಳಗಿಳಿದವರು, ಅರಿವಿಲ್ಲ ದವರು, ಚಂಡಾಲರಿಗಿಂತಲೂ ಚಂಡಾಲರಾದರೂ ಚಕ್ರವನು ಹಿಡಿದವನ, ಮಣಿವಣ್ಣನ, ಸ್ವಾಮಿಯ ಆಳೆಂದು ಮನದೊಳರಿತರೆ ಅಂತಪ್ಪ ಅಡಿಯಾಳು ಗಳ ಅಡಿಯಾಳುಗಳು ನಮ್ಮೊಡೆಯರು. ಅಂಥಹ ವರ ಅಡಿಗಳು ನಮಗೆ ಶರಣು" ಎಂದು. ಭಗ ವಂತನಿಗಾಗಿ ಇವರು ಪರಿಪರಿಯಾಗಿ ಪರಿತಪಿಸಿ ದರು. "ಸ್ವಾಮಿಯೇ ! ನಾನು ಕಡುಪಾಪಿ ನಿಜ. ಪಾಪಿಯಾದ ನನ್ನ ಮುಂದೆ ನಿಂತು "ನೀನು ಪಾಪಿ" ಎಂದಾದರೂ ಹೇಳಿ ಹೋಗು! ಹಾಗಾ ದರೂ ನಿನ್ನನ್ನು ಕಾಣುವಂತಾಗಲಿ" ಎಂದು ದೇವ ರನ್ನು ಕಾಣುವ ತಮ್ಮ ಹಂಬಲವನ್ನು ಹಲವು ರೀತಿ ಯಲ್ಲಿ ಪ್ರಕಟಿಸಿದರು.

ಹೀಗೆ ಆಳ್ವಾರುಗಳು ತಮ್ಮ ದಾಸಭಾವತ್ವ ವನ್ನು ಹಲವು ವಿಧಗಳಲ್ಲಿ ಪ್ರಕಟಿಸಿ ಭಗವದ ನುಭವದಲ್ಲಿ ಆಳವಾಗಿ ಮುಳುಗಿ ಅದರಿಂದುಂ ಟಾದ ಆನಂದವನ್ನು ಮಧುರವಾದ ಗೀತೆಗಳ ರೂಪದಲ್ಲಿ ಹಾಡಿದರು. ಕಷ್ಟಪರಂಪರೆಗಳಿಂದ ಕೂಡಿದ ಸಂಸಾರವೆಂಬ ಮಹಾಸಾಗರದಲ್ಲಿ ಬಿದ್ದು ದಡವನ್ನು ಕಾಣದೆ ವ್ಯಥೆಗೊಂಡಿರುವ ಮಾನವರೇ! ಓಂಕಾರ ಪೂರ್ವಕವಾಗಿಯೂ, ತತ್ತ್ವರಹಸ್ಯಗಳನ್ನುಳ್ಳ ದ್ದಾಗಿಯೂ, ನೀವು ಮುಳುಗಿ ಹೋಗಿರುವ ಸಂಸಾರ ಸಾಗರದಿಂದೆಬ್ಬಿಸಿ ಮೇಲಕ್ಕೆ ತರಲು ಸಾಧಕವಾಗಿ ದ್ದಾಗಿಯೂ ಇರತಕ್ಕ "ಓಂ ನಮೋ ನಾರಾಯ ಣಾಯ" ಎಂಬ ಅಷ್ಟಾಕ್ಷರೀ ಮಂತ್ರವನ್ನು ಬಾರಿ ಬಾರಿಗೂ ಧ್ಯಾನಮಾಡಿದರೆ ಸಂಸಾರದಿಂದ ಬಿಡು ಗಡೆ ಮಾಡಿ ಮುಕ್ತಿಯನ್ನು ಕೊಟ್ಟು ನಿಮಗೆ ಅತ್ಯಂತ ಹಿತವನ್ನುಂಟುಮಾಡುತ್ತಾನೆ ಭಗವಂತನು" ಎಂದು ಕುಲಶೇಖರಾಳ್ವಾರರು ಹೇಳಿದರು.

ನಮ್ಮ ಜೀವನವು ವ್ಯರ್ಥವಾದ ಮಾರ್ಗದಲ್ಲಿ ಹೋಗದಿರಲು ನಾವು ಯಾವಾಗಲೂ ಪರಮ ಪಾವನನಾಗಿರತಕ್ಕಂಥ ಭಗವಂತನ ಪೂಜೆ, ಅವನ ಸ್ತೋತ್ರ, ಅವನ ಸ್ಮರಣೆ, ಅವನ ಪಾದಸೇವೆಗಳಲ್ಲಿ ನಮ್ಮನ್ನು ತೊಡಗಿಸಿಕೊಳ್ಳುವುದರಿಂದ ದಾಸರಾದ ನಮಗೆ ಅವನು ಎಲ್ಲ ರೀತಿಯಿಂದಲೂ ಸ್ವಾಮಿಯಾ ಗಿದ್ದು ನಮ್ಮನ್ನು ಕಾಪಾಡುವನು. ಅವನನ್ನೇ ನಂಬಿ ದಾಗ ಅವನು ಸಲಹುದರಲ್ಲಿ ಸಂಶಯವೇ ಇಲ್ಲ. ನಾವು ಅವನ ಸೊತ್ತು. ಅವನ ಪಾದಸೇವೆಗಿಂತ ಬೇರೆ ಪ್ರಯೋಜನವಿಲ್ಲ. ಎಷ್ಟೇ ಪತಿತರಾದರೂ ಪ್ರಪತ್ತಿಮಾರ್ಗ ನಿಷ್ಠರಾದವರಿಗೆ ಮುಕ್ತಿಯು ನಿಶ್ಚಯ ಎಂಬುದೇ ಆಳ್ವಾರರ ಜೀವನದ ಸಂದೇಶ.

---"ವಿವಿಧ ಮೂಲಗಳಿಂದ"

**---ಕೆ. ವಿ. ಶ್ರೀನಾಥ್.**



# ಪಂಡರೀನಾಥ

---ಶ್ರೀ ಆರ್. ಜಿ. ಶ್ಯಾನಭಾಗ.

ಸಕ್ಕರೆ ಇರುವಲ್ಲಿ ಇರುವೆಗಳು ಮುತ್ತುವಂತೆ ದೇವಸಾನ್ನಿಧ್ಯ ಇರುವ ಕಡೆಗಳೆಲ್ಲ ಭಕ್ತ ಭಜಕರು ಮುತ್ತುತ್ತಾರೆ ಎಂಬ ಲೋಕೋಕ್ತಿಯನ್ನು ಶ್ರೀ ಕ್ಷೇತ್ರ ಪಂಢರಾಪುರ ರುಜುವಾತು ಪಡಿಸಿದೆ. ನಾಮದೇವ ಚಾಂಗದೇವ, ಜನಾಬಾಯಿ, ಚೋಖಾಮೇಳಾ, ಗೋರಾಕುಂಬಾರ, ನರಹರಿ ಸೋನಾರ, ಭಕ್ತದಾಮಾಜಿ, ಕಾನ್ಹಾ ಪಾತ್ರಾ, ಸಂತ ಸಖು; ಭಾನುದಾಸ, ಏಕನಾಥ, ಸಂತ ತುಕಾರಾಮ, ಸಮರ್ಥ ರಾಮದಾಸ, ಪುರಂದರದಾಸ ಹಾಗೂ ಜ್ಞಾನದೇವರು --ಮೊದಲಾದ ಭಕ್ತಿ ಪ್ರತಿಪಾದಕರು ಪಾಂಡುರಂಗನ ಸಾನ್ನಿಧ್ಯದಲ್ಲಿ ನೆರೆದು ಅವನ ಕುರಿತಾಗಿ ಹಾಡಿ ನರ್ತಿಸಿ ಭಕ್ತಿಯ ಕಂಪನ್ನು ನಾಡಿನಾದ್ಯಂತ ಬೀರಿದ್ದಾರೆಯಲ್ಲದೆ ಮುಕ್ತಿಯ ಮಾರ್ಗವನ್ನು ಲೋಕಕ್ಕೆ ತೋರಿಸಿದ್ದಾರೆ.

ತಿರುಪತಿಯ ತಿಮ್ಮಪ್ಪನ ದಿವ್ಯ ಹಾಗೂ ಭವ್ಯ ಮೂರ್ತಿಯನ್ನು ಕಂಡಾಗಲೇ ಭಕ್ತರಿಗೆ ಮುಕ್ತಿ. ಅಂತೆಯೇ ಅವನನ್ನು ಕಂಡು ಮುಕ್ತಿ ಎನ್ನುತ್ತಾರೆ. ಕಾಶಿಯಲ್ಲಿ ಭಾಗೀರಥಿಯಲ್ಲಿ ಮಿಂದಾಗಲೇ ವಿಶ್ವನಾಥನ ದರ್ಶನವಾಗಿ ಮುಕ್ತಿ ಲಭಿಸುವುದರಿಂದಲೇ ಭಕ್ತರ ಪಾಲಿಗೆ ಅವನು ಬಿಂದು ಮುಕ್ತಿ. ಪಂಡರಾಪುರದಲ್ಲಿ ಪಂಡರಿನಾಥನ ಪುತ್ಥಳಿಯನ್ನು ಸ್ಪರ್ಶಿಸಿದಾಗಲೇ ಮುಕ್ತಿ ದೊರೆಯುವುದರಿಂದ ಪಾಂಡುರಂಗನು ಮುಟ್ಟು ಮುಕ್ತಿ ಎಂದೆನಿಸಿಕೊಂಡಿದ್ದಾನೆ. ಪಂಢರಾಪುರದಲ್ಲಿ ಮಾತ್ರ ಸ್ಪರ್ಷದರ್ಶನದ ಭಾಗ್ಯವಿದೆ. ಅದರಿಂದಲೇ ಶ್ರೀ ಕ್ಷೇತ್ರ ಪಂಡರಾಪುರ, ಭೂವೈಕುಂಠವೆಂದು ಮೆರೆದಿದೆ.

ಕಲಿಯುಗದಲ್ಲಿ ಭಗವಂತನು ಮೌನಧಾರಿ ನಿಜ ಭಕ್ತರೊಡನೆ ಅವನು ಲೀಲಾ ವಿಹಾರವನ್ನು ಮಾಡುತ್ತಾನೆ. ಪಾಷಾಣ ಹೃದಯಿಗಳಿಗೆ ಅವನು ಕಲ್ಲಿನಂತೆ ಗೋಚರಿಸುತ್ತಾನೆ. ನಿಜಸಂತರಾದವರು ಪಂಢರಾಪುರದಲ್ಲಿ ವಿಠ್ಠಲನ ಪ್ರತ್ಯಕ್ಷ ದರ್ಶನವನ್ನು ಪಡೆದು ಪುನಿತರಾಗಿದ್ದಾರೆ. ಹಲವು ಸಂತ ಮೇಳಗಳು ಇಲ್ಲಿ ಬಂದಿವೆ ಹಾಗೂ ಬರುತ್ತಿವೆ. ಚಂದ್ರಭಾಗದಲ್ಲಿ ಸ್ನಾನ ಮಾಡಿ ಶ್ರೀ ಪಾಂಡುರಂಗನ ಚರಣಕಮಲಗಳಿಗೆ ಮಸ್ತಕವನ್ನಿಟ್ಟು ಅವರು ತಮ್ಮ ಹಣೆ ಬರಹಗಳನ್ನು ತಿದ್ದಿಕೊಂಡು ಬದುಕನ್ನು ಪಾವನ ಹಾಗೂ ಸಾರ್ಥಕಗೊಳಿಸಿಕೊಂಡಿರುವರು. ದ್ವಾರಕಾ ಅಯೋಧ್ಯಾ



ಹಾಗೂ ಮಥುರಾಗಳಲ್ಲಿ ಭಗವಂತನು ಅವತರಿಸಿದಂತೆ ಪಂಡರಾಪುರದಲ್ಲಿಯೂ ಅವತರಿಸಿರುವನು. ಸಕಲ ಧರ್ಮಿಯರೂ ಪಾಂಡುರಂಗನನ್ನು ಪ್ರೇಮಪೂರ್ವಕವಾಗಿ ಭಜಿಸುವುದನ್ನು ಇಲ್ಲಿ ಕಾಣಬಹುದು. ಆಷಾಢ, ಕಾರ್ತೀಕ ಮಾಸದಲ್ಲಿ ಇಲ್ಲಿ ಮಾಡಿದ ಯಾತ್ರೆಯಿಂದ ಮನಸ್ಸು ಪಾಪ ಭೀತಿಗಳಿಂದ ರಹಿತವಾಗುವುದು.

ಹರಿಯ ಚತುರ್ಧಾಮಗಳಲ್ಲಿ ಪಂಡರಾಪುರ ದಕ್ಷಿಣಧಾಮ, ಮಥುರಾ, ದ್ವಾರಕಾ, ಜಗನಾಥಪುರಿ, ಶ್ರೀಹರಿಯ ಸನ್ನಿಧಾನ ಇರುವ ಇತರ ತಾಣಗಳಾಗಿವೆ. ಪಾಂಡುರಂಗನು ಚೈತನ್ಯ ಸ್ವಯಂಭೂ ಮೂರ್ತಿಯಾಗಿ ಇಟ್ಟಂಗಿಯ ಮೇಲೆ ಪ್ರತ್ಯಕ್ಷ ನಿಂತಿದ್ದಾನೆ. ಪುಂಡರಿಕನ ಭೇಟಿಗಾಗಿ ದ್ವಾರಕೆಯ ಸರ್ವ ಸಂಪತ್ತನ್ನು ತೆಗೆದುಕೊಂಡು ಹೃಷೀಕೇಶನು ಪಂಢರಾಪುರಕ್ಕೆ ಬಂದಿರುವನು, ವೈಕುಂಠವನ್ನು ಬಿಟ್ಟು ಬಂದು ನಿಂತ ಭಕ್ತವತ್ಸಲ ಪಾಂಡುರಂಗನ ಸ್ಥಳ ಪುರಾಣದ ಸುತ್ತಣ ರೋಚಕ ಕಥೆಯೊಂದು ರೂಪಗೊಂಡಿದೆ.

## ಲೋಹತೀರ್ಥ ಉದ್ಭವ :--

ಪಂಚಮಿಯ ದಿನ ಶಂಕರ ಪಾರ್ವತಿಯರಿಬ್ಬರು ವರುಣನ ಭೇಟಿಗಾಗಿ ತೆರಳಿದ್ದರು. ದಾರಿಯಲ್ಲಿ ಪಾರ್ವತಿಗೆ ನೀರಡಿಕೆಯಾಯಿತು. ಅವಳ ಬಾಯಾರಿಕೆಯನ್ನು ತಣಿಸಲು ತನ್ನ ತ್ರಿಶೂಲನ್ನು ಭೂಮಿಗೆ ಹೊಡೆದು ಶಂಕರನು ಭೋಗವತಿಯ ನೀರನ್ನು ಮೇಲೆ ತೆಗೆದನು. ಈ ಜಲದಿಂದ ಪಾರ್ವತಿ ತನ್ನ ನೀರಡಿಕೆಯನ್ನು ಇಂಗಿಸಿಕೊಂಡಳು. ಈ ಜಲಸ್ಥಾನವೇ ಪುಂಡಲೀಕನ ಮಂದಿರ ಹತ್ತಿರ ಇರುವ ಲೋಹತೀರ್ಥವಾಗಿದೆ.

ಇಂದ್ರನು ಗೌತಮ ಋಷಿಯ ಶಾಪದಿಂದ ಸಹಸ್ರಾಕ್ಷದಿಂದ ಪೀಡಿತನಾದನು. ಈ ವ್ಯಾಧಿಯಿಂದ ವಿಮೋಚನೆಯಾಗಲು ವಿಷ್ಣುವಿಗೆ ಶರಣು ಹೋದನು. ವಿಷ್ಣು ಮಹಾಶಯನು ಅವನ ಕೈಯಲ್ಲಿ ಒಂದು ಲೋಹದಂಡವನ್ನು ಕೊಟ್ಟು ಯಾವ ತೀರ್ಥದಲ್ಲಿ ಈ ಲೋಹದಂಡವು ತೇಲುವುದೋ ಆ ತೀರ್ಥದ ಸ್ನಾನದಿಂದ ನಿನ್ನ ವ್ಯಾಧಿಯು ವಾಸಿಯಾಗುವುದೆಂದು ಹರಿಸಿದನು. ಇಂದ್ರನಿಗೆ ನೀಡಿದ ಲೋಹದಂಡ ಪಂಢರಾಪುರದಲ್ಲಿ ಮೇಲೆ ಉಲ್ಲೇಖಿಲಿದ ತೀರ್ಥದಲ್ಲಿ ತೇಲಿತು. ಅಲ್ಲಿ ಮಾಡಿರುವ ಸ್ನಾನದಿಂದ ಇಂದ್ರನ ಸರ್ವಾಂಗದಲ್ಲಿರುವ ಛಿದ್ರಗಳು ಮಾಯವಾದವು. ಅವನು ತೇಜಃಪುಂಜನಾಗಿ ಗೋಚರಿಸಿದ, ಅಂದಿನಿಂದ ಈ ತೀರ್ಥ ಲೋಹದಂಡ ತೀರ್ಥ ಎಂದು ನಾಮವಾಸಿಯಾಯಿತು.

## ಪುಂಡಲೀಕನ ಪುನರ್ಜನ್ಮ :--

ಕೃಷ್ಣಾವತಾರದ ಕಾಲದಲ್ಲಿ ಮುಚಕುಂದನು ದೈತ್ಯರ ವಿರುದ್ಧ ಹೋರಾಡಲು ದೇವತೆಗಳಿಗೆ ನೆರವನ್ನು ನೀಡಿದನು. ಈ ಯುದ್ಧದಲ್ಲಿ ದೇವತೆಗಳಿಗೆ ವಿಜಯ ಲಭಿಸಿತು. ಯುದ್ಧದಿಂದ ಬಳಲಿದ ಮುಚಕುಂದ ತನ್ನ ದಣಿವನ್ನು ಆರಿಸಿಕೊಳ್ಳಲು ಗವಿಯಲ್ಲಿ ಮಲಗಿದನು. ತನ್ನನ್ನು ಎಚ್ಚರಿಸಿದವನು ನಾಶಹೊಂದಲಿ ಎಂದು ಮಲಗಿದ್ದನು.

ಕಾಲಯವನೆಂಬ ದೈತ್ಯನು ಕೃಷ್ಣನ ಸಂಹಾರಕ್ಕಾಗಿ ಅವನನ್ನು ಅಟ್ಟಿಕೊಂಡು ಬಂದಿದ್ದನು. ಶ್ರೀ ಕೃಷ್ಣ ಪರಮಾತ್ಮ ಮುಚಕುಂದನು ವಿಶ್ರಮಿಸಿಕೊಳ್ಳುತ್ತಿರುವ ಗವಿಯಲ್ಲಿ ಅವಿತುಕೊಂಡನು. ಬೆನ್ನಟ್ಟಿ ಬರುತ್ತಿರುವ ಕಾಲಯವನನ ಕಾಲು ಗವಿಯಲ್ಲಿ ಮಲಗಿರುವ ಮುಚಕುಂದನ ಮೇಲೆ--ಬಿದ್ದಿತು. ನಿದ್ರಿಸುತ್ತಿದ್ದ ಮುಚಕುಂದ ಎದ್ದಾಗ ಅವನ ಕ್ರೋಧಾಗ್ನಿ ಕಾಲಯವನನ್ನು ಭಸ್ಮಗೊಳಿಸಿತು. ಮುಚಕುಂದನಿಗೆ ಶ್ರೀ ಕೃಷ್ಣ ಪರಮಾತ್ಮನ ದರ್ಶನವಾಯಿತು. ಮುಚಕುಂದನೇ ಪುನರ್ಜನ್ಮದಲ್ಲಿ ಪುಂಡಲೀಕನಾದನು.

## ಭಕ್ತ ವತ್ಸಲನಾದ ಪಾಂಡುರಂಗ :--

ಪೂರ್ವಾಶ್ರಮದಲ್ಲಿ ಒಂದು ದಿನ ಪುಂಡಲೀಕನು ತನ್ನ ಪತ್ನಿಯೊಂದಿಗೆ ವಾರಣಾಸಿ ಕ್ಷೇತ್ರಕ್ಕೆ ತೆರಳುವಾಗ ಅವನು ಕುಕ್ಕುಟ ಮುನಿಯ ಆಶ್ರಮಕ್ಕೆ ಬಂದನು. ಮುನಿಯ ಮಾತಾಪಿತರ ಭಕ್ತಿಗೆ ಮೆಚ್ಚಿದ ಗಂಗಾ, ಯಮುನಾ ಹಾಗೂ ಸರಸ್ವತಿಯರು ದಿನಾಲು ಅವನ ಅಂಗಳದಲ್ಲಿ ಕಸಗೂಡಿಸುತ್ತಿದ್ದರು. ಕಪ್ಪು ರೂಪಿಯಾಗಿರುವ ಈ ತ್ರಿವೇಣಿಯರು ಮರಳಿ ತೆರಳುವಾಗ ಶ್ವೇತರೂಪಿಯಾಗಿ ಹೋಗುವುದನ್ನು ಕಣ್ಣಾರೆ ಕಂಡ ಪುಂಡಲೀಕನು ವಿಚಾರಿಸಿದ. ತ್ರಿವೇಣಿಯರ ಉಪದೇಶದಿಂದ ಪಶ್ಚಾತ್ತಾಪಪಡುತ್ತಾನೆ. ಅದರಿಂದ ಪ್ರಭಾವಿತನಾದ ಅವನು ತನ್ನ ತಂದೆ ತಾಯಿಯರ ಸೇವೆಗೆ ದೀಕ್ಷಾಬದ್ಧನಾಗಿ ಮಾತಾ ಪಿತರ ಸಹಿತ ಕಾಶಿಯಾತ್ರೆಗೆ ತೆರಳುವನು.

ಕಾಶಿಯಾತ್ರೆಯನ್ನು ಮುಗಿಸಿಕೊಂಡು ಹಿಂಡಿವನದಲ್ಲಿಯ ಲೋಹದಂಡ ತೀರ್ಥದ ಬಳಿ ಬಂದಿಳಿದನು. ಅಲ್ಲಿಯೇ ಮಾತಾಪಿತರ ಸೇವೆಯಲ್ಲಿ ಕಾಲ ಕಳೆಯುತ್ತಿರುವ ಪುಂಡಲೀಕನನ್ನು ಕಂಡು ದೇವರು ಸಂತುಷ್ಟನಾಗಿ ಬೇಕಾದ ವರವನ್ನು ಕೇಳು ಎಂದು ಕೇಳಿದನು.

ದೇವಾ ನೀನು ವಿಠ್ಠಲ ಎಂಬ ಹೆಸರಿನಿಂದ ಇಲ್ಲಿಯೇ ಚಿರಸ್ಥಾಯಿಯಾಗು. ಭೀಮಾತೀರ ಎರಡನೇ ದ್ವಾರಕೆಯಾಗಲಿ ಇಲ್ಲಿ ಬಂದು ನಿನ್ನ ದರ್ಶನ ತೆಗೆದುಕೊಳ್ಳುವವರಿಗೆ ಭಕ್ತಿ ಹಾಗೂ ಮುಕ್ತಿಯನ್ನು ಕೊಡು ಎಂದು ಪುಂಡಲೀಕನು ಬೇಡಿದಾಗ ಶ್ರೀ ಪಾಂಡುರಂಗನು ತಥಾಸ್ತು ಎಂದನು.

ಪುಂಡಲೀಕನು ಎಸೆದಿರುವ ಇಟ್ಟಂಗಿಯ ಮೇಲೆ ಭಗವಾನ್ ವಿಷ್ಣು ಅವನ ಇಚ್ಛಾನುಸಾರವಾಗಿ ವಾಸ್ತವ್ಯ ಮಾಡಿಕೊಂಡು ನಿಂತನು, ಪುಂಡಲೀಕನು ಎಸೆದಿರುವ ಇಟ್ಟಂಗಿ ಎಂದರೆ ವೃತ್ರಾಸುರನ ತಪಸ್ಸಿನ ಶಾಪದಿಂದ ದಗ್ಧನಾದ ಇಂದ್ರನೇ ಆಗಿದ್ದಾನೆ.

## ಕ್ಷೇತ್ರ ಪ್ರದಕ್ಷಿಣೆ :--

ಪುಂಡಲೀಕ ಮಂದಿರ, ಗೋಪಾಳಪುರ, ಪದ್ಮಾವತಿ ಮಂದಿರ, ಚಂದ್ರಭಾಗಗುಡಿ, ಶ್ರೀಧರ ಸ್ವಾಮಿ ಸಮಾಧಿ, ಶ್ರೀದತ್ತಮಂದಿರ, ವ್ಯಾಸ ಮಂದಿರ, ಉದ್ಧವಸ್ಥಾನ, ವಿಷ್ಣು ಪಾದ ತಾಣಗಳು ಪಂಢರಾಪುರದ ಪ್ರೇಕ್ಷಣೀಯ ಸ್ಥಳಗಳಾಗಿವೆ. ಚಂದ್ರಭಾಗಾ ಸ್ನಾನ, ಕ್ಷೇತ್ರ ಪ್ರದಕ್ಷಿಣೆ, ಪಾಂಡುರಂಗನ ದರ್ಶನ, ಹರಿಕೀರ್ತನೆ ಇವೇ ಮೊದಲಾದ ಚತುರ್ವಿದ ಪೂಜಾಕೈಂಕರ್ಯಗಳನ್ನು ಭಕ್ತ ಭಜಕರು ಇಲ್ಲಿ ಸಲ್ಲಿಸಿದ್ದಾರೆ. ಆಷಾಢ ಹಾಗೂ ಕಾರ್ತೀಕ ಮಾಸದಲ್ಲಿ ಇಲ್ಲಿ ನಡೆಯುವ ವಿಶೇಷ ಪೂಜೆಗಳಿಂದ ಶ್ರೀ ಕ್ಷೇತ್ರ ಪಂಢರಾಪುರವು ಭೂವೈಕುಂಠದಂತೆ ಗೋಚರಿಸುವುದು. ಮಂದಿರದಲ್ಲಿ ನಿತ್ಯ ಪೂಜೆಯು ದೇವರ ಜಾಗರಣದಿಂದ ಆರಂಭ, ದೇವರ ಚರಣ ಹಾಗೂ ಮುಖ ಪ್ರಕ್ಷಾಲನ ಮಾಡುತ್ತಾರೆ. ಕಾಕಡಾರತಿಯನ್ನು ಬೆಳಗಿಸುತ್ತಾರೆ, ಗಂಧಮಾಲಾ ಹಾಕುತ್ತಾರೆ ಸಕ್ಕರೆ ಬೆಣ್ಣೆಯ ನೇವೇದ್ಯವನ್ನು ಸಲ್ಲಿಸುವರು.

## ಮೊಳಗಿದ ಭಕ್ತಿ ವಿಜಯ :--

ಶ್ರೀ ಕ್ಷೇತ್ರ ಪಂಡರಾಪುರ ಸಂತರ ತವರೂರು. ಪಂಢರಿನಾಥನಿಗೆ ಸಕಲ ಮತೀಯ ಭಕ್ತರು ಆಗಿ ಹೋಗಿರುವರು. ಸೋನಾರ ಜಾತಿಯಲ್ಲಿ ನರಹರಿ, ಸಿಂಪಿಗ ಜಾತಿಯಲ್ಲಿ ನಾಮದೇವ, ಕುಂಬಾರರಲ್ಲಿ ಗೋರಾ, ಅಗಸರಲ್ಲಿ ಗಾಡಿಗಿಬುವಾ, ಹೊಲೆಯರಲ್ಲಿ ಚೋಖಾಮೇಳಾ, ಬ್ರಾಹ್ಮಣರಲ್ಲಿ ದಾಮಾಜಿ, ಸಖು, ಹಾಗೂ ಮರಾಠರಲ್ಲಿ ತುಕಾರಾಮ ಶ್ರೀ ವಿಠ್ಠಲನ ಪರಮ ಭಕ್ತರು.

ಅದ್ವೈತ ತತ್ವಸಿದ್ಧಾಂತಿ ಜಗದ್ಗುರು ಶಂಕರಾಚಾರ್ಯರು ಪಂಢರಾಪುರಕ್ಕೆ ಬಂದು ಶ್ರೀ ಪಾಂಡುರಂಗನನ್ನು ಪ್ರತ್ಯಕ್ಷಕಂಡು ಎಂಟು ಶ್ಲೋಕಗಳಿಂದ ಆತನನ್ನು ಸ್ತುತಿಸಿ ಈ ಪರಬ್ರಹ್ಮನ ಉಪಾಸನೆಯನ್ನು ಮಾಡಿದರು. ಅದುವೇ ಅವರ ಬಾಯಿಯಿಂದ ಪಾಂಡುರಂಗಾಷ್ಟಕ ಆಗಿ ಹೊರಸೂಸಿತು.

ವೈಷ್ಣವ ಪಂಥ ಪ್ರತಿಪಾದಕ ರಾಮಾನುಜಾಚಾರ್ಯರು ಪಂಡರಾಪುರದಲ್ಲಿಯೇ ಹಲವು ಕಾಲ ನೆಲೆಸಿ ದೇವ ಮಹಿಮೆಯನ್ನು ಪ್ರಚುರ ಪಡಿಸಿದರು. ದ್ವೈತ ಸಿದ್ಧಾಂತಿ ಮಧ್ವಾಚಾರ್ಯರೂ ಶ್ರೀ ಕ್ಷೇತ್ರಕ್ಕೆ ದೇಟಿಯನ್ನು ನೀಡಿದರು.

ಕೋಣನಮುಖದಿಂದ ವೇದವನ್ನು ಉಚ್ಚರಿಸುವಂತೆ ಮಾಡಿದ ಶ್ರೀ ಜ್ಞಾನೇಶ್ವರನು ಪಂಢರಾಪುರಕ್ಕೆ ಬಂದಿದ್ದರು. ಚಂದ್ರಭಾಗಾ ತೀರದಲ್ಲಿ ನಿಂತು ವಿಠ್ಠಲನ ನಾಮ ಸಂಕೀರ್ತನೆಯ ಪತಾಕೆಯನ್ನು ನಿಲ್ಲಿಸಿದರು. ಪಂಢರಿನಾಥ ಇವರೊಡನೆ ಪ್ರತ್ಯಕ್ಷ ಮಾತನಾಡುತ್ತಿದ್ದನು.

ವಿಠ್ಠಲನನ್ನು ಬಿಟ್ಟು ನಾಮದೇವನು ಜ್ಞಾನದೇವನ ಜೊತೆಗೆ ಹೋಗಲು ಒಲ್ಲದಿದ್ದಾಗ ತನ್ನ ನಿಜ ಕೃಪೆಯಿಂದ ಬೆಳೆದಿರುವ ನಾಮದೇವನನ್ನು ಹಿಂಬಾಲಿಸಿ ಹೋಗು ಎಂದು ನಾಮದೇವನ ಕೈಹಿಡಿದು ಅವನನ್ನು ಜ್ಞಾನದೇವನ ಕೈಗೆ ಕೊಟ್ಟನು. ನಾನು ಇವನಿಂದ ಅಂತರಿಸಿರುವುದಿಲ್ಲ ಎಂದು ವಿಠ್ಠಲನು ಉಮ್ಮಳಿಸಿದನು.

ಜನಾಬಾಯಿಯನ್ನು ತನ್ನ ಜೊತೆಗೆ ಕುಳ್ಳಿರಿಸಿಕೊಂಡು ಭೋಜನ ಮಾಡಿ ಸಂತುಷ್ಟಗೊಂಡ ಭಕ್ತವತ್ಸಲನಿವನು. ಜನಾಬಾಯಿಯ ಬೀಸುವ ಕಲ್ಲಿಗೆ ನೆರವಿನ ಹಸ್ತವನ್ನು ಚಾಚಿದ ಪರಮಾತ್ಮ ಇವನು. ಅವಳು ಭಕ್ತಿ ಪೂರ್ವಕವಾಗಿ ಅಭಂಗಗಳನ್ನು ಹಾಡುತ್ತಿರುವಾಗ ಪಂಢರೀನಾಥನು ಆನಂದದಿಂದ ತಲೆದೂಗುತ್ತಿದ್ದನು.

ಡೊಲೆಯವನಾದ ಚೋಖಾಮೇಳನ ಕೈಹಿಡಿದು ಆತನನ್ನು ತನ್ನ ಗರ್ಭಾಗಾರದಲ್ಲಿ ಕರೆದೊಯ್ದು ತನ್ನ ಹೃದಯ ರಹಸ್ಯವನ್ನು ತಿಳಿಸುತ್ತ ಮಾತನಾಡಿದನು. ಚೋಖಾಮೇಳನನ್ನು ಊರ ಹೊರಗೆ ಜನರು ಅಟ್ಟಿದಾಗ ವಿಠ್ಠಲನು ಅವನಿರುವಲ್ಲಿ ಹೋಗಿ ಭೋಜನ ಮಾಡಿದನು.

ಹರಿಭಕ್ತ ಗೋರಾ ಕುಂಬಾರನಿಗೆ ಗತಿಸಿದ ಎರಡೂ ಕೈ ಹಾಗೂ ಮಗುವನ್ನು ದಯಪಾಲಿಸಿದ ಕರುಣಾಮಯ ಪಾಂಡುರಂಗ.

ನಿಸ್ಸೀಮ ಶಿವಭಕ್ತ ಅಕ್ಕಸಾಲಿಗ ನರಹರಿ ಹರಿಯನ್ನು ಭೇದಭಾವದಿಂದ ಕಾಣುತ್ತಿದ್ದ ಪಾಂಡುರಂಗನಿಗೆ ಉಡುದಾರ ಹಾಕಲು ಹೋದಾಗ ಕಣ್ಣು ಕಟ್ಟಿಕೊಂಡು ಹೋಗಿದ್ದನು. ಪಾಂಡುರಂಗನ ಮೂರ್ತಿಯ ಮೇಲೆ ಕೈ ಮಾಡಿಸಿದಾಗ ಅದೊಂದು ಶಿವಲಿಂಗದಂತೆ ಅವನಿಗೆ ಭಾಸವಾಗಿ ಕಣ್ತೆರೆದನು. ಸುಂದರ ಸಗುಣ ವಿಠ್ಠಲ ಮೂರ್ತಿಯು ಅವನಿಗೆ ಗೋಚರಿಸಿತು. ಹರಿಹರರಲ್ಲಿ ಭೇದ ಮಾಡಿರುವುದಕ್ಕೆ ಅವನು ಪಶ್ಚಾತ್ತಾಪ ಮಾಡುತ್ತಾನೆ. ಅಂದಿನಿಂದ ಪಾಂಡುರಂಗನ ಭಕ್ತನಾಗಿ ಪರಿವರ್ತನೆಗೊಳ್ಳುವನು.

ಭೀಕರ ಬರಗಾಲ ಬಿದ್ದಾಗ ಹರಿಭಕ್ತ ದಾಮಾಜಿ ಆಹಾರ ಧಾನ್ಯಗಳನ್ನೆಲ್ಲ ವಿಠ್ಠಲನ ಹೆಸರಿನಿಂದ ಬಡಬಗ್ಗರಿಗೆ ಹಂಚಿದನು. ತನ್ನ ದೊರೆಯಾದ ಬೀದರ ಬಾದಶಹನ ಅನುಮತಿ ಇಲ್ಲದೆ ವಿತರಿಸಿದಕ್ಕೆ ಸಿಕ್ಕಿಬಿದ್ದಾಗ ಪಾಂಡುರಂಗನನ್ನು ಸ್ತುತಿಸುತ್ತಾನೆ. ಭಕ್ತವತ್ಸಲನಾದ ಆ ಪಾಂಡುರಂಗ ಹೊಲೆಯನ ವೇಷ ಧರಿಸಿ ಬಾದಶಹನ ದರಬಾರಕ್ಕೆ ಬಂದು ಲೆಕ್ಕ ಮತ್ತು ಹಣವನ್ನು ಒಪ್ಪಿಸಿ ದಾಮಾಜಿಯನ್ನೇ ಆರೋಪದಿಂದ ಮುಕ್ತಗೊಳಿಸುತ್ತಾನೆ.

ವೇಶ್ಯೆಯ ಮಗಳಾದ ಕಾನ್ಹಾಪಾತ್ರಾಳು ಅತಿರೂಪವತಿ. ಹಣಕ್ಕಾಗಿ ತನ್ನ ದೇಹವನ್ನು ಪರರಿಗೆ ಮಾರಿಕೊಳ್ಳಲು ಇಚ್ಛಿಸಲಿಲ್ಲ. ಬೀದರ ಬಾದಶಹನು ತನ್ನನ್ನು ಪಟ್ಟದರಸಿಯನ್ನಾಗಿ ಅಪೇಕ್ಷಿಸಿರುವುದನ್ನು ತಿರಸ್ಕರಿಸಿದಳು. ಚೆಲುವರಲ್ಲಿ ಚೆಲುವನಾದ ವಿಠ್ಠಲನೇ ತನ್ನ ಪತಿ ಎಂದು ಅಚಲವಾಗಿ ನಂಬಿದವಳು. ಹರಿಗರ್ಪಿಸಿದ ದೇಹವನ್ನು ನರರಿಗರ್ಪಿಸಬಾರದೆಂಬ ಏಕಚಿತ್ತವನ್ನು ತಾಳಿದಳು. ಇದರಿಂದ ಕಾನ್ಹಾಪಾತ್ರಾಳ ದೇಹದಿಂದ ದಿವ್ಯಕಾಂತಿಯೊಂದು ಹೊರಟು ಹೋಗಿ ಪಾಂಡುರಂಗನಲ್ಲಿ ಐಕ್ಯವಾಯಿತು.

ಸಾಧ್ವಿ ಶಿರೋಮಣಿಯಾದ ಸಂತಸಖು ಅತ್ತೆಯ ಕಾಟ ಹಾಗೂ ವಿವೇಕಹೀನನಾದ ಪತಿಯ ಹಿಂಸೆಯಿಂದ ಸಂಸಾರ ಸಾಗರದಲ್ಲಿ ತೊಳಲಾಡುತ್ತಿರುವಾಗ ಪಾಂಡುರಂಗನನ್ನು ಮೊರೆಹೋದಳು, ಪಾಂಡುರಂಗ ಸಖುವಿನ ರೂಪವನ್ನು ಧರಿಸಿ ಅವಳ ಸಂಸಾರ ತಾಪತ್ರಯಗಳನ್ನು ತಾನು ಸಹಿಸುವನು ಅತ್ತೆಯ ಬಂಧನದಲ್ಲಿರುವ ನಿಜ ಸಖುವನ್ನು ಪಂಢರಾಪುರ ಉತ್ಸವಕ್ಕೆ ಹೋಗಲು ಅನುವು ಮಾಡಿಕೊಡಲು ತಾನು ಸಖು ರೂಪವನ್ನು ಧರಿಸಿ ಅವಳ ಮನೆಯಲ್ಲಿಯೇ ಇರುವನು.

ಭಕ್ತ ನಾಥರ ಮನೆಯಲ್ಲಿ ಶ್ರೀ ಪಾಂಡುರಂಗನೇ ಶ್ರೀ ಖಂಡ್ಯಾ ಎಂಬ ಊಳಿಗದ ಆಳಾಗಿ ನಿಂತನು. ಕಾರಣ ಅವನ ಹತ್ತಿರ ಯಾವ ಸೇವಕರೂ ಇರಲಿಲ್ಲ. ಕಾವಡಿ ಹೊತ್ತು ನೀರು ತರುವುದು, ದೇವರ ಮಂದಿರವನ್ನು ಗುಡಿಸಿ ಸಾರಿಸುವುದು, ಪಾತ್ರೆಯನ್ನು ತೊಳೆಯುವುದು -- ಇತ್ಯಾದಿ ಕೆಲಸವನ್ನು ಶ್ರೀ ಹರಿಯೇ ಮಾಡುತ್ತಿದ್ದನು. ಬ್ರಾಹ್ಮಣನೊಬ್ಬನಿಗೆ ನಾನು ಏಕನಾಥರ ಮನೆಯಲ್ಲಿ ಹನ್ನೆರಡು ವರ್ಷದಿಂದ ಕೂಲಿಯಾಳಾಗಿ ದುಡಿಯುತ್ತಿದ್ದೇನೆಂದು ಶ್ರೀ ಹರಿಯು ಸ್ವಪ್ನದಲ್ಲಿ ಹೇಳುತ್ತಾನೆ.

ಪಾಂಡುರಂಗನ ತನ್ನ ಪರಮ ಭಕ್ತ ಸಂತ ತುಕಾರಾಮನಿಗೆ ಸ್ವಪ್ನದಲ್ಲಿ ಬಂದು ಅಭಂಗಗಳನ್ನು ರಚಿಸಲು ಆಜ್ಞಾಪಿಸಿದನು, ನಿಂದಕರು ತುಕಾರಾಮನ ದೇವಭಕ್ತಿಯಿಂದ ಹೆಚ್ಚುತ್ತಿರುವ ಪ್ರತಿಷ್ಠೆಯನ್ನು ಸಹಿಸಿದಾದರು. ಅವರೆಲ್ಲರೂ ತುಕಾರಾಮನಿಂಗ ರಚಿತವಾದ ಅಭಂಗಗಳನ್ನು ಇಂದ್ರಾಣಿಯಲ್ಲಿ ಮುಳುಗಿಸಿದರು. ಪಾಂಡುರಂಗನು ಅಲ್ಲಿ ಪ್ರತ್ಯಕ್ಷನಾಗಿ ಇದ್ದಕ್ಕಿದ್ದಂತೆ ಅವುಗಳನ್ನು ಮೇಲೆ ತೆಗೆದನು.

ಸಮರ್ಥರಾಮದಾಸರನ್ನು ವಿಠ್ಠಲನು ಶ್ರೀರಾಮ ರೂಪದಿಂದ ದರ್ಶನವಿತ್ತು ಸಂತೋಷಗೊಳಿಸಿದನು.

ಜಿಪುಣನಾದ ಶ್ರೀನಿವಾಸನು ಮನೆಯಲ್ಲಿ ಶ್ರೀಹರಿಯು ವೃದ್ಧಬ್ರಾಹ್ಮಣನ ರೂಪದಲ್ಲಿ ಯಾಚಕನಾಗಿ ಬಂದು ಅವನನ್ನು ಸಂತನಾಗಿ ಮಾರ್ಪಡಿಸಿದನು. ಅವನೇ ಮುಂದೆ ಸರ್ವಸ್ವ ದಾನ ಮಾಡಿ ದಾಸರ ದಾಸ ಪುರಂದರ ದಾಸನಾಗುತ್ತಾನೆ. ಪಾಡುರಂಗನು ಈ ದಾಸನೊಡನೆ ಸಖನಂತೆಯೂ ಸೇವಕನಂತೆಯೂ ನಟಿಸಿ ಅಪಾರ ಮಹಿಮೆಯನ್ನು ತೋರಿಸಿದ್ದಾನೆ. ಪುರಂದರದಾಸರ ಹಾಡುಗಳೆಲ್ಲವೂ ಶ್ರೀ ಹರಿಯನ್ನು ತನ್ನೆದುರು ನಿಲ್ಲಿಸಿಕೊಂಡು ಮಾತಾಡಿದಂತೆಯೂ ವಾದಿಸಿದಂತೆಯೂ ನಿಂದಿಸಿದಂತೆಯೂ ಕಂಡುಬರುತ್ತದೆ. ದಾಸರೊಡನಾಡಿದ ವಿಠ್ಠಲನ ಲೀಲೆಯು ಭಕ್ತಿ ರಸವನ್ನೇ ಹರಿಸಿದೆ.

ವಿಜಯನಗರದ ದೊರೆ ರಾಮರಾಜನು ಪಂಢರಾಪುರದ ಪಾಂಡುರಂಗನ ಪುತ್ಥಳಿಯನ್ನು ನಿತ್ಯ ಪೂಜೆಗಾಗಿ ತನ್ನ ಆಸ್ಥಾನಕ್ಕೆ ಒಯ್ದಿದ್ದನು, ದೇವರಿಲ್ಲದ ಗುಡಿಯು ಜೀವವಿಲ್ಲದ ದೇಹದಂತೆ ಆಯಿತು. ಜಾತ್ರೆಗಾಗಿ ಬಂದಿರುವ ಭಕ್ತ ಭಜಕರು ಭಗವಂತನ ಆಗಮನಕ್ಕಾಗಿ ಪ್ರಾರ್ಥಿಸಿದಾಗ ಎಲ್ಲವೂ ನಿಷ್ಫಲವಾಯಿತು. ಸೂರ್ಯೋಪಾಸಕಗಾದ ಸಂತ ಭಾನುದಾಸರು ವಿಜಯನಗರಕ್ಕೆ ತೆರಳಿ ತನ್ನ ಪ್ರೇಮಾಶ್ರುಗಳಿಂದ ವಿಠ್ಠಲನ ಪಾದವನ್ನು ತೊಳೆದರು. ಬಾನುದಾಸನ ಭಕ್ತಿ ಪ್ರೇಮಕ್ಕೆ ಮೆಚ್ಚಿದ ಪಾಂಡುರಂಗ ಸಕಾಲದಲ್ಲಿ ಪಂಢರಾಪುರಕ್ಕೆ ಬಂದನು.

ಪಾಂಡುರಂಗನ ಭಕ್ತಿ ಒಂದರಿಂದಲೇ ಮುಕ್ತಿ ಸಾಧ್ಯ ಎನ್ನುವುದನ್ನು ನಾಡಿನಾದ್ಯಂತ ಭಕ್ತಿವಿಜಯವು ಸಾರಿದೆ.

* * * * *

# ತಾತಾಚಾರ್ಯರು

---ಸಿ. ಗೋವಿಂದಾಚಾರ್.

ಭಕ್ತಿಯ ಪ್ರಾಕಾರಗಳು ಅನಂತವಾಗಿವೆ. 'ಭಕ್ತಿ ಕ್ರೀತೋ ಜನಾರ್ದನ' ಎಂಬಂತೆ ಭಕ್ತಿ ಒಂದಿದ್ದರೆ ಸಾಕು ಭಗವಂತನು ಯಾವ ತ್ಯಾಗಕ್ಕೂ ಸಿದ್ಧ. ಅವನಿಗೆ ಪ್ರಾಕೃತವಾದ ಹುಟ್ಟು ಸಾವು ಯಾವುದೂ ಇಲ್ಲ. ಅಂದಮೇಲೆ ತಂದೆ ತಾಯಿ ಬಂಧು ಬಳಗ ಸಂಸಾರ ಯಾವುದೂ ಇಲ್ಲ. ಆದರೆ ಅಂಥಾ ಭಾವನೆಗಳನ್ನು ತಾಳಿ ಮಗನ ಮೇಲೆ ತಾಯಿಯ ಮಮತೆ ಪ್ರೀತಿ ಹೇಗಿರುತ್ತೆ. ವಿಶ್ವಾಸಾರ್ಹವಾದ ಸ್ನೇಹ ಹೇಗಿರುತ್ತೆ, ಆದರ್ಶಗುರು ಶಿಷ್ಯರ ಸಂಬಂಧ ಹೇಗಿರುತ್ತೆ. ಎಂಬುದನ್ನು ಸವಿದಿದ್ದಾನೆ. ನೆಪಮಾತ್ರಕ್ಕೆ ದೇವಕಿಯ ಪುತ್ರ ಆದರೆ ಪೋಷಣೆ ಎಲ್ಲಾ ಗೋಕುಲದ ಯಶೋದೆಯ ಮಡಿಲಲ್ಲಿ 'ಚಿನ್ನಿಕೋಲು ಚೆಂಡು ಬುಗರಿಯನಾಡುತ ಸಣ್ಣವರೊಡಗೂಡಿ ನೀಬಾರೋ' ಎಂದು ದಾಸವರೇಣ್ಯರು ಕೃಷ್ಣನ ಸ್ನೇಹಭಾವವನ್ನು ಸ್ತುತಿಸಿದ್ದಾರೆ. ಬಾಲಕರಲ್ಲಿ ಮುಗ್ಧತೆಯನ್ನೇ ಎದುರು ನೋಡುತ್ತಿದ್ದ. ಪುತ್ರ ವಾತ್ಸಲ್ಯ ಹೇಗಿರುತ್ತೆ ಎಂಬುದನ್ನು ದಶರಥನಿಂದ ಕಂಡುಕೊಂಡ. ರಾಮಾನುಜರನ್ನು ತಂದೆಯಂತೆ, ಮಗನಂತೆ, ಗುರುವಿನಂತೆ, ಶಿಷ್ಯನಂತೆ ಕಂಡು ಸವಿದ. ಅರ್ಚೆಯಲ್ಲೂ ಇಂಥಾ ಲೀಲೆಗಳನ್ನು ಮಾಡಿರುತ್ತಾನೆ. ವಲ್ಲಭಾಚಾರ್ಯರು ಗೋವರ್ಧನ ಮೂರ್ತಿಯನ್ನು ಮುಸ್ಲಿಮರ ಲೂಟಿ ಹೊಡೆತದಿಂದ ತಪ್ಪಿಸಿ ರೇಷ್ಮೆವಸ್ತ್ರದಲ್ಲಿ ಸುತ್ತಿ ಯುದ್ಧಭೂಮಿಯನ್ನು ತೊರೆದು ನಾಥದ್ವಾರದಲ್ಲಿ ಪ್ರತಿಷ್ಠಾಪಿಸಿದರು. ತಾಯಿಯು ಮಗುವನ್ನು ಕಾಪಾಡುವಂತೆ ಅರ್ಚಾಮೂರ್ತಿಗಳನ್ನು ಕಾಪಾಡಿದ 'ಅಮ್ಮಾಳ್' ಎಂಬ ಉತ್ತಮ ವಂಶವಿದೆ. ತಿರುವೆಂಗಡ ನಾಯಕನೂ ಕೂಡ ತಾನು ಮಗನಾಗಿ ಭಕ್ತನೇ ತಂದೆಯಾಗಿ ಅನುಭವಿಸಿರುವ ಲೀಲೆಯಿಂದ ಉತ್ತಮ ಭಕ್ತ ಪರಂಪರೆಯೇ ಉದಯವಾಗಿ ಲೋಕ ಕಲ್ಯಾಣವಾಯಿತು. ಇದುವೇ ತಾತಾಚಾರ್ಯ ಪರಂಪರೆ -- ಒಂದು ಮಹಾವಂಶ.

ಶ್ರೀ ವೈಷ್ಣವ ಧರ್ಮ ಚೆನ್ನಾಗಿ ಗೋಚರವಾಗಿ ಸ್ಥಿರವಾಗಿ ನಿಲ್ಲಲು ಆಳ್ವಾರರ ಪರಂಪರೆ ಕಾರಣವಾದರೆ, ಸಂಚಾರ, ಸತ್ಕಾಲಕ್ಷೇಪ, ಪ್ರವಚನ, ಪ್ರಸಾರ ಮುಂತಾದ ಸಾಧನಗಳಿಂದ ಶ್ರೀ ವೈಷ್ಣವ ಧರ್ಮವು ಚೆನ್ನಾಗಿ ಅಭಿವೃದ್ಧಿ ಹೊಂದಲು ಆಚಾರ್ಯ ಪರಂಪರೆ ಅದರಲ್ಲೂ ಮುನಿತ್ರಯ ಎಂದು ಪ್ರಸಿದ್ಧಿಯಾಗಿರುವ ನಾಥಮುನಿ, ಯಾಮುನ ಹಾಗೂ ರಾಮಾನುಜ ಮುನಿಗಳು ಬಹಳಷ್ಟು ಕಾರಣವಾಗಿ ಪಿಳ್ಳಾನ್ ದೇಶಿಕಾದಿಗಳ ಮೂಲಕ ಏಕಧಾರೆಯಾಗಿ ಇಲ್ಲಿಯವರೆಗೂ ಪ್ರವಹಿಸಿದೆ.

ಆಳವಂದಾರರ (ಯಾಮುನರು) ಅಭೀಷ್ಟ ನೆರವೇರಿಸಲು ಅವರ ಶಿಷ್ಯ-- ಪ್ರಶಿಷ್ಯರುಗಳು ಭಗೀರಥ ಪ್ರಯತ್ನ ನಡೆಸಿರುತ್ತಾರೆ. ಈ ಶಿಷ್ಯರ ಪೈಕಿ ನಂಬಿ ಹಾಗೂ ಅರ್ಕೈಯರ್ ವಂಶಗಳು ಆಳವಂದಾರರ ಔರಸ ವಂಶವೆಂದು ಮುಂದುವರೆಯಿತು. ಇವರುಗಳ ಜೊತೆಗೆ ಅಚ್ಚಾನ್, ತೋಳಪ್ಪರ್, ಚೊಟ್ಟೈ ಹಾಗೂ ದೇಶಿಕ ಬುಡಕಟ್ಟಿನವರು ಭಗವದ್ಭಕ್ತಿ ಹಾಗೂ ಆಚಾರ್ಯ ನಿಷ್ಠೆ ಒಂದೇ ಸಮನೆ ಮುಂದುವರೆಯುವಂತೆ ಶ್ರಮಿಸಿದರು.

ಶಠಮರ್ಷಣ ಗೋತ್ರಜರಾದ ಪೆರಿಯ ತಿರುಮಲೈನಂಬಿ ಅಥವ ಶ್ರೀಶೈಲಪೂರ್ಣರು ತಿರುಪತಿಯಲ್ಲಿ ನೆಲೆಸಿ ಪ್ರತಿದಿನ ಸಾಯಂಕಾಲ ರಾಮಾಯಣ ಕಾಲಕ್ಷೇಪ ಹಾಗೂ ಮಿಕ್ಕ ಸಮಯದಲ್ಲಿ ಶ್ರೀನಿವಾಸನ ಸೇವೆಯನ್ನೇ ಮಾಡುತ್ತಾ ಕಾಲ ಕಳೆದರು. ಭಕ್ತಿಯ ಆದೇಶದಲ್ಲಿ ತಾವು ತಂದೆಯಾಗಿಯೂ ಶ್ರೀನಿವಾಸನನ್ನು ಮಗನಂತೆಯೂ ಭಾವಿಸಿದರು. ಇವರ ಕೈಂಕರ್ಯ ಭವಾನಿಯನ್ನು ಕಂಡ ಶ್ರೀನಿವಾಸನು ಒಂದು ಸಂದರ್ಭದಲ್ಲಿ ನಂಬಿಗಳನ್ನು 'ಮಮತಾತ' ಎಂದು ಕರೆದ. ಅಂದಿನಿಂದ ನಂಬಿಯವರು ಮತ್ತು ಇವರ ಮುಂದಿನ ಪೀಳಿಗೆಯವರು 'ತಾತಾಚಾರ್ಯ' ಎಂದು ಸಂಭೋದಿಸಲ್ಪಟ್ಟರು. ಇವರುಗಳು ಕ್ರಮೇಣ "ಪ್ರಥಮಾಚಾರ್ಯ" ಹಾಗೂ "ಆಚಾರ್ಯಪುರುಷ" ಎಂದೂ ಪ್ರಸಿದ್ಧಿಯಾದರು.

ಶ್ರೀಶೈಲ ಪೂರ್ಣರ ಪುತ್ರ ತಿರುಕ್ಕುರೈ ಪಿರಾನ್ ಪಿಳ್ಳಾನ್. ಇವರ ಮೊಮ್ಮೊಗ್ಗನ ಮಗ ತಿರುಮಲೈ ಶ್ರೀನಿವಾಸಾಚಾರ್ಯ, ವೇದಾಂತದೇಶಿಕರ ಪ್ರಮುಖ ಶಿಷ್ಯ. ಇವರ ಮನೆತನದವರು ತಾತದೇಶಿಕ ತಾತಾರ್ಯ, ತಾತೈಯ್ಯಂಗಾರ್ಯ, ತಾತಾಚಾರ್ಯ ಎಂಬ ನಾಮಾಂಕಿತದಿಂದ ಹೆಚ್ಚಾಗಿ ಕಂಚಿ ಮತ್ತು ನವಾಳ್‌ಪಾಕಂನಲ್ಲಿ ನೆಲೆಸಿದರು. ಇನ್ನು ಕೆಲವರು ಪತ್ತಾಚಾರ್ಯ ಎಂದು ಕುಂಭಕೋಣದಲ್ಲಿಯೂ, ಮೊದಲ್ ಮಾಳಿಗೈ ತಾತಾಚಾರ್ಯ ಎಂದು ಶ್ರೀರಂಗದಲ್ಲಿಯೂ ತೋಳಪ್ಪಾಚಾರ್ಯರೆಂದು ನಂಬಾಕಂ ಶಂಖುಪುರಂಗಳಲ್ಲಿ, ಇನ್ನೂ ಕೆಲವರು ಶ್ರೀವಿಲ್ಲಿಪುತ್ತೂರ್, ಸತ್ಯಮಂಗಲಂ, ತಿರುಪತಿ ಮದರಾಸ್ ಮುಂತಾದ ಸ್ಥಳಗಳಲ್ಲಿ ನೆಲೆಸಿದರು. ತಿರುಮಲೈ, ಶ್ರೀನಿವಾಸ, ವೆಂಕಟ ಹಾಗೂ ವರದ ಎಂಬ ದಿವ್ಯನಾಮಗಳನ್ನೇ ಹೆಚ್ಚಾಗಿ ಇಟ್ಟುಕೊಳ್ಳುತ್ತಿದ್ದರು. ರಾಮಾಯಣದ ಬಗ್ಗೆ ಉನ್ನತಜ್ಞಾನ ಹಾಗೂ ಒಂದು ವಿಶೇಷವಾದ ಆಧ್ಯಾತ್ಮಿಕ ಶಕ್ತಿ ಪ್ರಾಪ್ತವಾಯಿತು. ರೋಗ ಪೀಡಿತರನ್ನು ಗುಣಪಡಿಸುವಲ್ಲಿ ಹಾಗೂ ವಾಮಾಚಾರಗಳನ್ನು ದುಷ್ಟಶಕ್ತಿಗಳನ್ನು ಹೊಡೆದೋಡಿಸುವಲ್ಲಿ ನೆರವಾಗಿ ಸ್ವಲ್ಪ ಕಾಲದಲ್ಲೇ ಪ್ರಸಿದ್ಧರಾಗಿ ಸರ್ವಜನಾದರಣೀಯರಾದರು. ವಿಷಯ ರಾಜರುಗಳಿಗೂ ತಿಳಿಯಿತು. ಕೆಲವು ರಾಜ ಹಾಗೂ ಸಾಮಂತರ ಕುಮಾರಿಯರಿಗೆ ಹಿಡಿದಿದ್ದ ಪಿಶಾಚಿ ಭಯ ಹಾಗೂ ರಾಜ್ಯದ ಸುತ್ತಲಿದ್ದ ದುಷ್ಟಶಕ್ತಿಗಳನ್ನು ತಾತಾಚಾರ್ಯರು ದೂರ ಮಾಡಿದ್ದಲ್ಲದೆ ಶತ್ರುಭಯವನ್ನು ಇಲ್ಲದಂತೆ ಮಾಡಿದರು. ಇದರಿಂದ ತಾತಾಚಾರ್ಯರಿಗೆ ರಾಜರ ಒಲವು ಹೆಚ್ಚಾಯಿತು. ತಾತಾಚಾರ್ಯರನ್ನು ರಾಜಗುರುವಾಗಿಯೂ ಹಾಗೂ ಆಧ್ಯಾತ್ಮಿಕ ವಿಚಾರಗಳಲ್ಲಿ ಮಾರ್ಗದರ್ಶಕರಾಗಿಯೂ ಸ್ವೀಕರಿಸಿದರು. ರಾಜ್ಯದಲ್ಲಿರುವ ವಿಷ್ಣುದೇವಸ್ಥಾನಗಳ ನಿರ್ಮಾಣ, ಜೀರ್ಣೋದ್ಧಾರ ಕೆಲಸಗಳು ಹಾಗೂ ಸರ್ವಾಂಗೀಣ ಅಭಿವೃದ್ಧಿ ದೊರೆಗಳ ಸಹಾಯದಿಂದ ತಾತಾಚಾರ್ಯರ ಸಮ್ಮುಖದಲ್ಲಿ ಆರಂಭವಾಯಿತು. ತಾತಾಚಾರ್ಯರ ವಂಶಕ್ಕೂ ವಿಜಯನಗರದ ಅರಸ ವಂಶಕ್ಕೂ ನಿಕಟ ಸಂಪರ್ಕ ಏರ್ಪಟ್ಟಿತು. ವೀರಸಾಯಣ ಉದಯಾರ್, ವಿರೂಪಾಕ್ಷ, ಮಲ್ಲಿಕಾರ್ಜುನರಿಂದ ವೆಂಕಟಪತಿ ದೇವ ಮಹಾರಾಯ ನಂತರ ಮೈಸೂರು ಅರಸ ಮುಮ್ಮಡಿ ಕೃಷ್ಣರಾಜ ಒಡೆಯರವರೆಗೂ ತಾತಾಚಾರ್ಯರು ಒಂದುಕಡೆ ರಾಜಗುರುವಾಗಿ ಆಸ್ಥಾನದ ಸೇವೆಯನ್ನೂ ಮತ್ತೊಂದುಕಡೆ ಅನುಪಮ ಭಕ್ತರಾಗಿ ಆಸ್ಥಾನದಿಂದ ದೇವಸ್ಥಾನಗಳ ಅಭಿವೃದ್ಧಿಗೆಂದೇ ದಾನವಾಗಿ ಬಂದ ಧನಸಂಪತ್ತುಗಳನ್ನೆಲ್ಲಾ ಸದ್ವಿನಿಯೋಗ ಮಾಡಿ ಲೌಕಿಕ -- ವೈದಿಕ ಬೆರೆತ ಜೀವನವನ್ನು ಸಾಗಿಸಿದರು. ತಾತಾಚಾರ್ಯರ ಮನೆತನಕ್ಕೆ ಮತ್ತೊಂದು ಸ್ವತ್ತೆಂದರೆ ಸತ್ಸಂಗ. ನಲ್ಲಾನ್ ಚಕ್ರವರ್ತಿ ಕಂದಾಡೈ, ಕಡಾಂಬಿ ಹಾಗೂ ಅಮ್ಮಾಳ್ ವಂಶಜರು ನೆಲೆಸಿದ್ದರು. ಇದರಿಂದ ಆಧ್ಯಾತ್ಮಿಕ ವಿಚಾರ ವಿನಿಮಯ, ಮತ ಬೆಳವಣಿಗೆಗೆ ಈ ಸರ್ವಜ್ಞ ಸಮುದಾಯವು ಬಹಳಷ್ಟು ಕಾರಣವಾಯಿತು.

ವಿಜಯನಗರದ ಎರಡನೆ ವಿರೂಪಾಕ್ಷನಿಗೆ ಏಟೂರು ಸಿಂಗ್ರಾಚಾರ್ಯ ಮತ್ತು ರಂಗಾಚಾರ್ಯರು, ಕಾಕತೀಯ ರಾಜ್ಯದ ನೃಸಿಂಹ ಪ್ರಭು

ಳಿಗೆ ಚೊಟ್ಟೈ ಕುಮಾರ ತಾತ್ಯೆಯ್ಯಂಗಾರ್ಯರು, ವೀರನರಪತಿ ಕೃಷ್ಣದೇವರಾಯನಿಗೆ ವೆಂಕಟ ತಾತಾರ್ಯರು, ಅಚ್ಯುತರಾಯ, ಸದಾಶಿವರಾಯ, ಅಳಿಯರಾಮರಾಯ, ಮೊದಲನೆ ಶ್ರೀರಂಗ ಇವರುಗಳಿಗೆ ವೆಂಕಟ ತಾತಾಚಾರ್ಯರ ಸಹೋದರ ಪಂಚಮತ ಭಂಜನಂ ತಾತದೇಶಿಕರು ರಾಜಗುರುಗಳಾಗಿದ್ದರು.

1500–1700 ಕಂಚಿ ವರದರಾಜಸ್ವಾಮಿ ದೇವಸ್ಥಾನ ಹಾಗೂ ತಾತಾಚಾರ್ಯರ ಚರಿತ್ರೆಯಲ್ಲಿ – ಒಂದು ಮುಖ್ಯವಾದ ಕಾಲ. ಪ್ರತಿದಿನವೂ ನೂರಾರು ಕನ್ಯೆಯರಿಗೆ ವಿವಾಹವನ್ನು ನೆರವೇರಿಸುತ್ತಿದ್ದುದರಿಂದ 'ಕೋಟಿಕನ್ಯಾದಾನಂ' ಎಂಬ ಬಿರುದಿದೆ. ಈ ಸತ್ಕಾರ್ಯಕ್ಕೆ ತಕ್ಕಂತೆ ರಾಜರಿಂದ ನೆರವು ಹಾಗೂ ನಿಧಿ ಸಂಗ್ರಹಣೆ ಸಾಧ್ಯವಾಗುತ್ತಿತ್ತು. ಸ್ವಮತ ಸಿದ್ಧಾಂತವನ್ನು ಸಮರ್ಥಿಸಲು 'ಪಂಚಮತ ಭಂಜನಮ್' ಎಂಬ ಅಮೋಘ ಕೃತಿಯನ್ನು ರಚಿಸಿ ಶೈವ, ಶಾಕ್ತ, ಜೈನ, ಬೌದ್ಧ, ಚಾರ್ವಾಕಮತ ಸಿದ್ಧಾಂತಗಳನ್ನು ನಿರಾಕರಿಸಿದ್ದರಿಂದ ಪಂಚಮತ ಭಂಜನಮ್, ಕೋಟಿಕನ್ನಿಕಾದಾನಂ, ಏಟೂರ್ ತಾತಾದೇಶಿಕ ಎಂದೇ ಕರೆಯಲ್ಪಟ್ಟರು. ಸಾರ್ವಜನಿಕ ಹಿತ ದೃಷ್ಟಿಯಿಂದ ಸರ್ವಧರ್ಮ ಸಮನ್ವಯದಲ್ಲೂ ಅವರಿಗೆ ಮನಸ್ಸಿತ್ತು. ಬಹುಶಃ ಇದಕ್ಕೆ ವಿಜಯನಗರದ ಪ್ರಭಾವವಿದ್ದಿರಬೇಕು. ತಿರುಕ್ಕುಳಿಕುನ್ರಂನಲ್ಲಿ ಶಿವ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ್ದಲ್ಲದೆ ಕ್ರೈಸ್ತರು ಚರ್ಚುಗಳನ್ನು ನಿರ್ಮಾಣ ಮಾಡಿಕೊಳ್ಳುವ ಅರಸರ ನಿರ್ಧಾರಕ್ಕೆ ತಾತದೇಶಿಕರು ಆಕ್ಷೇಪಿಸಲಿಲ್ಲ. ಹಸ್ತಿಗಿರಿಯ ಉಸ್ತುವಾರಿ ಕೆಲಸವನ್ನು ಶ್ರದ್ಧಾಭಕ್ತಿಗಳಿಂದಲೂ ದಕ್ಷತೆಯಿಂದಲೂ ನಿರ್ವಹಿಸುತ್ತಿದ್ದರು. ಇದನ್ನು ಗಮನಿಸಿದ ದೊರೆಗಳು ತಾತದೇಶಿಕರನ್ನು ವರದರಾಜಸ್ವಾಮಿ ದೇವಸ್ಥಾನದ ಶ್ರೀಕಾರ್ಯ ದುರಂಧರರನ್ನಾಗಿ (manager – General of the pagoda of Devarajaswamy Temple) ನೇಮಿಸಿ ದೇವಸ್ಥಾನದ ಸರ್ವತೋಮುಖ ಬೆಳವಣಿಗೆ ಹಾಗೂ ಅದಕ್ಕೆ ಬೇಕಾಗುವ ಸುಧಾರಣೆಗಳನ್ನು ತರಲು ಸಾಕಷ್ಟು ಅಧಿಕಾರ ಸ್ಥಾನಮಾನಗಳನ್ನು ಕೊಟ್ಟರು. ಇಂಥ ಉತ್ತೇಜನ ದೊರಕಿತಲ್ಲಾ ಎಂದು ತಾತದೇಶಿಕರು ಉತ್ಸಾಹ ಹಾಗೂ ಆನಂದಭರಿತರಾದರು. ದೇವಸ್ಥಾನದ ದೈನಂದಿನ ಪೂಜಾವಿಧಿಗಳಲ್ಲಿ ಹಾಗೂ ಆಡಳಿತ ನಿರ್ವಹಣೆಯಲ್ಲಿ ಸುಧಾರಣೆಗಳನ್ನು ಜಾರಿಗೆ ತಂದರು. ಪೂರ್ವದಿಂದಲೂ ಜಾರಿಯಲ್ಲಿದ್ದ ಪದ್ಧತಿಗಳನ್ನು ಅದರಲ್ಲೂ ವಡಗಲೈ ಸಂಪ್ರದಾಯಗಳನ್ನು ಅನೂಚಾನವಾಗಿ ಪಾಲಿಸಲು ಕಟ್ಟುಪಾಡುಗಳನ್ನು ಮಾಡಿದರು. ದೇವಸ್ಥಾನದ ಪ್ರತಿಯೊಂದು ಪ್ರಮುಖ ಭಾಗ ಹಾಗೂ ಮೂಲೆ ಮೂಲೆಗಳಲ್ಲಿ ವಡಗಲೈ ನಾಮಗಳನ್ನು ಇಂದಿಗೂ ನೋಡಬಹುದು. ದೇವಸ್ಥಾನದಲ್ಲಿ ತಾತಾಚಾರ್ಯರ ಶ್ರೀಕಾರ್ಯ ಈ ಕೆಳಕಂಡಂತಿತ್ತು.

(a) ಉತ್ಸವಗಳಲ್ಲೆಲ್ಲಾ ಆಳ್ವಾರುಗಳ ಪ್ರತಿನಿಧಿಯಾಗಿ ವರದರಾಜ ದಂಪತಿಗಳನ್ನು ಬರಮಾಡಿಕೊಳ್ಳುವುದು.

(b) ಶ್ರೀಕಾರ್ಯ ದುರಂಧರರಾಗಿ ವಿಶ್ವಕ್ಸೇನರನ್ನು ಪ್ರತಿನಿಧಿಸುವುದು.

(c) ದೇವರಾಜಸ್ವಾಮಿಗೆ ತಿರುಕಚ್ಚಿನಂಬಿಗಳು ಮಾಡುತ್ತಿದ್ದ ಚಾಮರ ಬೀಸಣಿಗೆ ಸೇವೆಯನ್ನು (ತಿರುವಳವಟ್ಟಂ) ಮಾಡುವುದು.

(d) ಬೆಳ್ಳಿ ತಟ್ಟೆಗಳಲ್ಲಿ ರೇಷ್ಮೆ ವಸ್ತ್ರ ಫಲಪುಷ್ಪ ತಾಂಬೂಲಗಳ ಸಮೇತ ಭೋಗಿ ಹಬ್ಬದಂದು ಪೆರಿಆಳ್ವಾರರ ಪರವಾಗಿ ಪ್ರತಿನಿಧಿಸಿ 'ಪೆರಿ ಆಳ್ವಾರರ ಸಮರ್ಪಣೆ' ಎಂದು ಹೇಳುವುದು. ಇದೇ ದಿವಸ

ನಡೆಯುವ ಮಾಲೆ ವಿನಿಮಯಿಸುವ ಉತ್ಸವದಲ್ಲಿ ಎರಡು ಭಾರೀ ಮಾಲೆಯನ್ನು ಸಕಲ ಮರ್ಯಾದೆಯಿಂದ ತರುವುದು.

(e) ಶ್ರೀ ಭಾಷ್ಯಕಾರರ ಪರವಾಗಿ ತೀರ್ಥ ಕೈಂಕರ್ಯ.

(f) ವರದ ರಾಜ ದಂಪತಿಗಳ ಉತ್ಸವದಲ್ಲಿ ರಕ್ಷಕ ಸೈನಿಕರಂತೆ (ತಿರುಮೇನಿಕಾವಲ್) ಸೇವೆ ಸಲ್ಲಿಸುವುದು-- ಇತ್ಯಾದಿ.

ಧರ್ಮರಾಯ ಬರುತ್ತಿದ್ದಾನೆಂದರೆ ಕುಳಿತು ವಿರಾಮವಾಗಿ ಮಾತಾಡುತ್ತಿದ್ದವರು ಮಾತು ನಿಲ್ಲಿಸಿ ಗೌರವಾರ್ಥವಾಗಿ ಎದ್ದು ನಿಲ್ಲುತ್ತಿದ್ದರು. ಹೆಂಗಸರು ಸೆರಗನ್ನು ಹೊದ್ದುಕೊಂಡು ಮನೆ ಒಳಗೆ ಹೋಗುತ್ತಿದ್ದರು. ತಾತಾಚಾರ್ಯರಿಗೂ ಇಂಥಾ ಸ್ಥಾನ ಮಾನಗಳಿದ್ದು ಇಡೀ ಪುರಕ್ಕೆ ಹಿತವನ್ನುಂಟು ಮಾಡುತ್ತಿದ್ದರು. ಎಷ್ಟೋ ಸಂದರ್ಭಗಳಲ್ಲಿ ಅಂತರ ಜಾತೀಯ ವಿವಾಹ, ವಿವಿಧ ಕೋಮುಗಳ ಕರ್ತವ್ಯ ಹಾಗೂ ಇತರ ಧಾರ್ಮಿಕ ಸಾಮಾಜಿಕ ವಿಚಾರಗಳಲ್ಲಿ ತಾತದೇಶಿಕರು ನ್ಯಾಯಾಧಿಪತಿಯ ಸ್ಥಾನದಲ್ಲಿದ್ದು ತೀರ್ಪು ಕೊಡುತ್ತಿದ್ದರು. ಹಾಗೆಯೇ ವಿಚಾರಣೆ ಮಾಡುವ ಅಧಿಕಾರವೂ ಅವರಿಗಿತ್ತು.

ದೇವಸ್ಥಾನದಲ್ಲಿ ಮೊದಲ ತೀರ್ಥ ಶಠಾರಿ ಪರಿವಟ್ಟ ಇವರ ಪ್ರಥಮ ಮರ್ಯಾದೆ ಹಕ್ಕಾಗಿತ್ತು. ಇದನ್ನು ತಪ್ಪಿಸುವ ಕಾರ್ಯ ಹಾಗೂ ಪೂರ್ವದಿಂದಲೂ ಜಾರಿಯಲ್ಲಿದ್ದ ವಡಗಲೈ ಸಂಪ್ರದಾಯ ತಪ್ಪಿಸಲು ಭಗೀರಥ ಪ್ರಯತ್ನ ನಡೆದಿತ್ತು. ಪೂರ್ವದಿಂದಲೂ ಬಂದಿದ್ದ ಪದ್ಧತಿಯನ್ನೇ ನ್ಯಾಯಾಲಯವು ಎತ್ತಿಹಿಡಿದು ಈ ಜಾಲದಲ್ಲಿದ್ದ ಅನೇಕ ಅಧಿಕಾರಗಳನ್ನು ವಜಮಾಡಿತ್ತು. ಈ ರೀತಿ ೪ ಬಾರಿ ನಡೆದಿದ್ದು ವಿರೋಧಿಗಳ ಶ್ರಮ ಫಲಿಸಲಿಲ್ಲ. ಅದೂ ಅಲ್ಲದೆ 'ತಾತಾಚಾರ್ಯ ನಿರ್ಮಿತ' ಎಂದು ಶಂಖ ಚಕ್ರ ವಡಗಲೈ ನಾಮ ಸಮೇತ ೧೦೦ ಕಾಲುಗಳ ಮಂಟಪ, ಗೋಡೆಗಳ ಮೇಲೆ ಕಂಭಗಳ ಮೇಲೆ ಉಲ್ಲೇಖವಿದ್ದುದರಿಂದ ಬೇರಾವ ಪದ್ಧತಿಗೂ ಇಲ್ಲಿ ಅವಕಾಶವಾಗಲಿಲ್ಲ.

ಪ್ರಪನ್ನಾಮೃತಂ, ಶಡ್ವಂಶ ಗುಣ ಕೀರ್ತನಂ ಮಹಾವಂಶ ಮಹಿಮೆ --ಮುಂತಾದ ಪುರಾತನ ಕೃತಿಗಳಲ್ಲಿ ತಾತಾಚಾರ್ಯರು ಮಾಡಿದ ಅಮೋಘ ಸೇವೆಯ ಉಲ್ಲೇಖವಿದೆ. ದೊಡ್ಡಯಾಚಾರ್ಯರು 'ಚಂಡಮಾರುತಂ' ಎಂಬ ತಮ್ಮ ಕೃತಿಯಲ್ಲಿ ಪಂಚಮತ ಭಂಜನಂ ತಾತದೇಶಿಕರ ಸೇವೆಯನ್ನು ಶ್ಲಾಘಿಸಿರುತ್ತಾರೆ. ಇವರ ವಿಶೇಷ ಪ್ರಾರ್ಥನೆ ಮೇರೆಗೆ ತಾತಾದೇಶಿಕರು ವಿಜಯನಗರದರಸರ ನೆರವಿನಿಂದ ಸಮುದ್ರಕ್ಕೆ ಎಸೆದಿದ್ದ ಗೋವಿಂದರಾಜ ಮೂರ್ತಿಯನ್ನು ಚಿದಂಬರದಲ್ಲಿ ಪುನಃ ಪ್ರತಿಷ್ಠಾಪಿಸಿದರು. (ಇದಕ್ಕಿಂತ ಸುಮಾರು ೩೦೦ ವರ್ಷಗಳ ಹಿಂದೆ ಶೈವರಾಜ ಕುಲೋತ್ತುಂಗನ ಹಿಂಸೆಯಿಂದ ತಪ್ಪಿಸಿಕೊಂಡು ಭಗವದ್ರಾಮಾನುಜಾಚಾರ್ಯರು ಅಂದು ಸನ್ನಿಧಿಯಲ್ಲಿದ್ದ ಗೋವಿಂದರಾಜ ಮೂರ್ತಿಯನ್ನು ತಿರುಪತಿಗೆ ಸ್ಥಳಾಂತರಿಸಿ ಮಹೋಪಕಾರ ಮಾಡಿರುತ್ತಾರೆ.) ಇದರಿಂದಾಗಿ ತಾತಾಚಾರ್ಯರಿಗೆ ತಂಜಾವೂರಿನ ನಾಯಕರ ಸ್ನೇಹವೂ ಆಗಿ ಚೋಳಮಂಡಲದಲ್ಲಿರುವ ವಿಷ್ಣುದೇವಸ್ಥಾನಗಳ 'ವೈದಿಕ ವಿಚಾರಿಣಾಕರ್ತ' ಎಂಬ ಬಿರುದು ಪ್ರಾಪ್ತವಾಯಿತು.

ಗೋಪುರ ಪ್ರಾಕಾರ ಮುಖಮಂಟಪ ವಿಮಾನ ನಿರ್ಮಾಣಕಾರ್ಯಗಳನ್ನು ಹಾಗೂ ಬಹಮನಿಯ ಅಹಮದ್‌ಷಾ ಶಿಥಿಲಗೊಳಿಸಿದ್ದ ದೇವಸ್ಥಾನದ ಕೆಲವು ಭಾಗಗಳ ದುರಸ್ಥಿ ಕಾರ್ಯಗಳನ್ನು, ದೇವರಿಗೆ ವಸ್ತ್ರಾಭರಣ, ಪೂಜಾ ವಿಧಿಗಳಿಗೆ ಪುದುವಟ್ಟು ಮುಂತಾದುವುಗಳನ್ನು ತಾತಾದೇಶಿಕರು ವ್ಯವಸ್ಥೆಗೊಳಿಸಿದರು. ರಾಜರು, ಸಾಮಂತರು, ಪಾಳೇಗಾರರು ಜಮೀನ್‌ದಾರರು ಹಾಗೂ ಸಿರಿವಂತರಿಂದ ಮೇಲಿಂದ ಮೇಲೆ ದೇವಸ್ಥಾನದ ಹೆಸರಿನಲ್ಲಿ ಭೂಮಿ ಗ್ರಾಮ, ಧನ ಧಾನ್ಯ ಸಂಪತ್ತುಗಳು ಬರತೊಡಗಿದವು. ನಿರ್ಮಾಣ ಕಾರ್ಯಕ್ಕೆಂದೇ ಪರಿಣಿತ ಕಲಸಗಾರರನ್ನು (ತಿರುಪುಲ್ಲಾಣಿಯ ರಾಮಾನುಜಯ್ಯ) ನೇಮಿಸಿದರು. ದುರಸ್ತಿ ಹಾಗೂ ಕಟ್ಟಡದ ಉಸ್ತುವಾರಿ ಕೆಲಸಕ್ಕೆ ವಿಶೇಷ ಸಮಿತಿಯೊಂದನ್ನೂ ರಚಿಸಿದರು. ತಿರುಪತಿ (ಫಣಿಪತಿಗಿರಿ) ಆನಂದನಿಲಯಕ್ಕೆ ಚಿನ್ನದ ರೇಕು ಹಾಕಿಸಿದರು. ಹಾಗೆಯೇ ಪುಣ್ಯಕೋಟಿ ವಿಮಾನ (ಪೆರುಂದೇವಿ ತಾಯಾರ್) ನಿರ್ಮಾಣ ಹಾಗೂ ಅದಕ್ಕೆ ಚಿನ್ನದ ರೇಕು ಹಾಕಿಸಲು ಕೃಷ್ಣದೇವರಾಯನಿಂದ ಅನುಮತಿ ಪಡೆದು ರಾಜನಿಂದಲೇ ಉದ್ಘಾಟನೆ ಮಾಡಿಸಿದರು. ದೇವಸ್ಥಾನದ ನಿರ್ಮಾಣ ದುರಸ್ಥಿ ಕಾರ್ಯಗಳು ಪೂರ್ಣವಾಗುವವರೆಗೂ ಅವರು ಜೀವಿಸಿರಲಿಲ್ಲ. ೯೦ ದೀರ್ಘವರ್ಷಗಳು ಜೀವಿಸಿದ್ದು ಪುರುಷಾರ್ಥವನ್ನೇ ಸಾಧಿಸಿ ೧೫೯೦ ರ ಸುಮಾರಿಗೆ ವರದನ ಪಾದ ಸೇರಿದರು. ಇವರಿಗೆ ಮಕ್ಕಳಿರಲಿಲ್ಲ. ಅಣ್ಣನ ಮಗನನ್ನೇ ದತ್ತು ತೆಗೆದುಕೊಂಡಿದ್ದರು. ಇವರೇ ಕೋಟಿ ಕನ್ನಿಕಾದಾನಂ ಏಟೂರ್, ಲಕ್ಷ್ಮೀಕುಮಾರ ತಾತದೇಶಿಕರು -- ೧೫೭೨--೧೬೩೨. ಇವರಿಗೆ ಲಕ್ಷ್ಮಿಕುಮಾರ ಎಂಬ ಹೆಸರು ಬಂದ ಪ್ರಸಂಗ ಸ್ವಾರಸ್ಯವಾಗಿದೆ. ಈ ಮಗು ಹುಟ್ಟಿದಾಗ ಅಳಲೇ ಇಲ್ಲ. ಇನ್ನೂ ಪ್ರಸವವಾಗಿಲ್ಲ ಎಂದೇ ಎಲ್ಲರೂ ತಿಳಿದಿದ್ದರು. ಇದ್ದಕ್ಕಿದ್ದಂತೆಯೇ ದಿವ್ಯ ತೇಜಸ್ಸುಳ್ಳ ಸಾಧ್ವೀಮಣಿ ಹೆಂಗಸೊಬ್ಬಳು ಬಂದು ಮಗುವಿಗೆ ಹಾಲುಣಿಸಿ ತನ್ನ ಸೀರೆ ಸೆರಗನ್ನು ಹರಿದು ಅದರ ಮೇಲೆ ಶಿಶುವನ್ನು ಮಲಗಿಸಿ ಮರೆಯಾದಳು. ನಂತರ ಮಗುವಿನ ಅಳುವಿನ ಶಬ್ದ ಎಲ್ಲರಿಗೂ ಕೇಳಿಸಿತು. ಗಂಡು ಮಗು ಹುಟ್ಟಿದೆಯೆಂಬ ಸಂತೋಷದಲ್ಲಿ ಸೀರೆಯ ಚೂರನ್ನು ಯಾರೂ ಸರಿಯಾಗಿ ಗಮನಿಸಲಿಲ್ಲ. ಕ್ರಮೇಣ ತಾಯಾರ್ ಸನ್ನಿಧಿಯಲ್ಲಿ ತಾಯಾರನ್ನು ನೋಡಿದವರೆಲ್ಲರೂ ವಿಸ್ಮಿತರಾದರು. ಮಗುವನ್ನು ಮಲಗಿಸಿದ್ದ ಸೀರೆ ಚೂರು ಹಾಗೂ ತಾಯಾರ್‌ನ ಮೇಲಿದ್ದ ಸೀರೆಯು ಒಂದೇ ಎಂದು ತಿಳಿಯಿತು. ಪ್ರಥಮ ಹುಟ್ಟಿದ ಹಬ್ಬದಂದು ಮಗುವಿಗೆ ವಿಪರೀತ ಜ್ವರ ಬಂದಾಗಲೂ ಲಕ್ಷ್ಮೀತಾಯಾರ್ ಅನುಗ್ರಹವಾಯಿತು. ಹೀಗೆ ಮಗುವಿಗೆ ಬಾಲ್ಯಾವಸ್ಥೆಯಲ್ಲೇ ಲಕ್ಷ್ಮೀಕಟಾಕ್ಷವಾದ್ದರಿಂದ 'ಲಕ್ಷ್ಮೀಕುಮಾರ' ಎಂದು ಹೆಸರಾಯಿತು.

ತಮ್ಮ ಪಿತೃವು ಕೈಗೊಂಡಿದ್ದ ದೇವಸ್ಥಾನ ನಿರ್ಮಾಣ ಕಾರ್ಯಗಳನ್ನು ಪೂರ್ಣಗೊಳಿಸುವುದು, ಶಿಷ್ಯಾರ್ಚನೆ ಹಾಗೂ ಸಿದ್ಧಾಂತ ಪ್ರಚಾರ ಕೈಗೊಳ್ಳುವುದು ಲಕ್ಷ್ಮಿಕುಮಾರ ತಾತದೇಶಿಕರ ಪರಮೋದ್ದೇಶವಾಗಿತ್ತು. ಇದನ್ನು ಸಾಧಿಸುವ ಸದಾವಕಾಶವೂ ಸನ್ನಿಹಿತವಾಯಿತು. ೧೬೦೦ ರ ಸುಮಾರಿಗೆ ವೆಂಕಟಪತಿದೇವ ಮಹಾರಾಯನ ಪಟ್ಟಾಭಿಷೇಕ ಮಹೋತ್ಸವವು ಲಕ್ಷ್ಮೀಕುಮಾರ ತಾತದೇಶಿಕರ ಸಮ್ಮುಖದಲ್ಲಿ ನೆರವೇರಿತು. ಆ ಸಂತೋಷದ ಭರದಲ್ಲಿ ರಾಯನು ರಾಜಗುರುವಿಗೆ ಇಡೀ ರಾಜ್ಯವನ್ನೇ ಬಳುವಳಿಯಾಗಿ ಕೊಡುವೆನೆಂದು ಘೋಷಿಸಿದ. ತಾತದೇಶಿಕರ ಧ್ಯೇಯಗಳು ರಾಜನಿಗೆ ಇಂಗಿತವಾಗಿ ದೇವಸ್ಥಾನದ ಕಾರ್ಯಗಳನ್ನು ಪೂರ್ಣಗೊಳಿಸಲು ಎಲ್ಲ ನೆರವನ್ನು ನೀಡಿದ. ದೇವಸ್ಥಾನದ ನಿರ್ಮಾಣ ಕಾರ್ಯಗಳು ಸಫಲವಾಯಿತು. ಇದರ ಜೊತೆಗೆ ಸಮಾಜ ಸೇವೆ ಕಾರ್ಯಗಳನ್ನೂ ಕೈಗೊಂಡರು.

(a) ಅಭಿವೃದ್ಧಿಯ ತಳಹದಿ ರಚನೆ (developmental infrastructive) ಅಗ್ರಹಾರಗಳು, ವಸತಿ ಹಾಗೂ ರಸ್ತೆ ನಿರ್ಮಾಣ ಕಾರ್ಯಗಳು. ದೇವರಾಜಸ್ವಾಮಿ ದೇವಸ್ಥಾನದ ಶಾಸನ ಒಂದರ ಪ್ರಕಾರ ತಾತದೇಶಿಕರು ೯೯ ಯಜ್ಞಯಾಗಗಳನ್ನು ೫೦೦ ಅಗ್ರಹಾರಗಳನ್ನೂ ಮಾಡಿರುತ್ತಾರೆ.

(b) ಕೆರೆ, ಕೊಳ ಹಾಗೂ ಬಾವಿ ನಿರ್ಮಾಣ: ಶಿಷ್ಯಾರ್ಜನೆಗಾಗಿ ದೀರ್ಘವಾದ ಪ್ರವಾಸವನ್ನು ಮುಗಿಸಿ ಕಂಚಿಗೆ ಮರಳಿ ಬರುತ್ತಿದ್ದಾಗ ಹೊತ್ತು ಮೀರಿದ್ದರಿಂದ ಒಂದು ಸ್ಥಳದಲ್ಲಿ ಬಿಡಾರ ಮಾಡಿ ರಾತ್ರಿಯೆಲ್ಲಾ ರಾಮನಾಮ ಜಪದಲ್ಲಿ ಕಳೆದರು. ಹೊರಗೆ ದರೋಡೆಕೋರರು ಧಾಳಿಮಾ

ಡಲು ಬಂದಿರುವುದು ಇವರಿಗೆ ಗೊತ್ತಿಲ್ಲ. ರಾಮ ನಾಮದ ಫಲವೋ ಏನೋ ಆಂಜನೇಯನು ದೊಡ್ಡ ಆಕಾರದ ಮನುಷ್ಯರೂಪದಲ್ಲಿ ಜೋರಾಗಿ 'ಹೂಂ'ಕಾರ ಮಾಡಿದ. ದರೋಡೆಕಾರರ ಸಂಖ್ಯೆಗಿಂತ ಳ ಪಟ್ಟು ಹೆಚ್ಚು ಸಂಖ್ಯೆಯಲ್ಲಿ ಧಡೂತಿ ಆಸಾಮಿಗಳು ಬಂದು ಕಳ್ಳರನ್ನು ಸದೆಬಡಿದರು. ಮಾರನೆ ದಿನ ಬೆಳಗ್ಗೆ ವಿಷಯ ತಿಳಿದ ತಾತದೇಶಿಕರು ಆನಂದಭರಿತರಾಗಿ 'ಹನುಮ ವಿಂಶತಿ' ಎಂಬ ಕೃತಿಯನ್ನು ರಚಿಸಿದರು. ಅಲ್ಲೇ ಹಲವಾರು ದಿನಗಳಿದ್ದು ಕೊಳವನ್ನು ನಿರ್ಮಾಣ ಮಾಡಿದರು. ಸ್ಥಳೀಯರು ಇವರನ್ನು 'ಅಯ್ಯಂಗಾರ್' ಎಂದು ಕರೆಯುತ್ತಿದ್ದರು. ಈ ಕೊಳವೇ ಅಯ್ಯಂ ಕೊಳಂ. ಕ್ರಮೇಣ ನಡುಬಾವಿಯೂ, ಸಂಜೀವರಾಯ ಸನ್ನಿಧಿಯೂ ಉದಯವಾಯಿತು. 'ಹನುಮ ವಿಂಶತಿ' ಕೃತಿಯಲ್ಲಿ ಈ ಕೊಳವನ್ನು 'ರಾಮತಟಾಕ' ಎಂದೂ ಕರೆದಿದ್ದಾರೆ. ಸಾರ್ವಜನಿಕರು ಇದನ್ನು 'ತಾತ ಸಮುದ್ರ' ಎಂದೂ ನಂತರ – ಟನ್ನೇರಿ ಟ್ಯಾಂಕ್ ಎಂದು ಕರೆದಿದ್ದಾರೆ. ಪ್ರತಿ ಚೈತ್ರ ಮಾಸದಲ್ಲಿ ವರದರಾಜಸ್ವಾಮಿ ಉತ್ಸವವು ಇಲ್ಲಿಗೆ ಬಂದು ಅವಭೃತ ಹಾಗೂ ನಡುಬಾವಿ ಉತ್ಸವಗಳು ಜರುಗುವುವು. ಇಂದಿಗೂ ಅವರ ಹೆಸರುಳ್ಳ ರಸ್ತೆ, ಪೇಟೆ, ಬೀದಿ ಬಡಾವಣೆಗಳನ್ನೂ ನೋಡಬಹುದು.

(c) ಕಾಲಹರಣ ಮಾಡುವುದು ತಾತದೇಶಿಕರ ನಿಘಂಟಿನಲ್ಲಿಲ್ಲ. ಬಿಡುವಿದ್ದಾಗ ಸಾಹಿತ್ಯ ಬೆಳವಣಿಗೆಗೆ ಅವಕಾಶ ಮಾಡಿಕೊಳ್ಳುತ್ತಿದ್ದರು. ಹೀಗೆಯೇ ಮುಂದುವರೆದು ಪಂಚಗ್ರಂಥಿ ನಿಪಹರಣಮ್, ಸಪ್ತಗ್ರಂಥಿ ನಿಪಹರಣಮ್, ನಿಗಮ ಪರಿಮಳ ಅರುಂಪದಂ, ಲಕ್ಷ್ಮೀ ನಿಯುದಮ್ ಮತ್ತು ಪಾರಿಜಾತ ಅಪಹರಣಂ, ತತ್ವಕ್ಕೆ ಸಂಬಂಧಿಸಿದಂತೆ 'ಸಾತ್ವಿಕ ಬ್ರಹ್ಮವಿದ್ಯಾ ವಿಲಾಸ' ಪುರಾಣಕ್ಕೆ ಸಂಬಂಧಿಸಿದ ಪಾಂಡುರಂಗ ಮಹಾತ್ಮೆ ಎಂಬ ಅಮೋಘ ಕೃತಿಗಳನ್ನು ರಚಿಸಿದರು. ಇವರ ಸಮಕಾಲೀನರಾದ ಆಂಧ್ರಕವಿ ಚೆನ್ನಮರಾಜು ಮಟ್ಲ ಅನಂತ ಹಾಗೂ ತರಿಗೊಪ್ಪಲ ಮಲ್ಲಣ್ಣ ಇವರುಗಳಿಂದ ಪ್ರಶಂಸೆ ಪಡೆದಿದ್ದಾರೆ. ಚೈತನ್ಯ ಪ್ರಭು ಹಾಗೂ ವಲ್ಲಭಚಾರ್ಯರೂ ಇವರ ಸಮಕಾಲೀನರು.

(d) ಇವರ ತುಲಾಭಾರದಿಂದ ಬಂದ ಚಿನ್ನವನ್ನು ಕಲ್ಯಾಣಕೋಟಿ ವಿಮಾನ ನಿರ್ಮಾಣಕ್ಕೆ ಉಪಯೋಗಿಸಿ ೧೬೧೪ ರಲ್ಲಿ ಪೂರ್ಣಗೊಳಿಸಿದರು.

(e) ದೇವಸ್ಥಾನದಲ್ಲಿ ನಡೆದಿರುವ ಸತ್ಕಾರ್ಯಗಳ ಬಗ್ಗೆ ಶಾಸನ ಮಾಡಿಸಿದ್ದು ತಿರುಕ್ಕಣ್ಣಮಂಗೈ, ಕುಂಭಕೋಣ, ಶ್ರೀರಂಗ ಮುಂತಾದ ದಿವ್ಯಕ್ಷೇತ್ರಗಳಲ್ಲಿ ವೇದಾಂತ ದೇಶಿಕರ ಸನ್ನಿಧಿಗಳನ್ನು ನಿರ್ಮಾಣ ಮಾಡಿದರು.

(f) ಔರಂಗ್‌ಜೇಬ್‌ನ ಧಾಳಿಯಿಂದ ವರದರಾಜ ಮೂರ್ತಿಗಳನ್ನು ತಪ್ಪಿಸಿ ಉಡಯ್ಯಾರ್ ಪಾಳ್ಯಂಗೆ ಸ್ಥಳಾಂತರಿಸಿದರು. ರಾಜಕಾರ್ಯದ ಸಲುವಾಗಿ ಅವರು ಆ ಸಂದರ್ಭದಲ್ಲಿ ಕಂಚಿಯಲ್ಲಿರಲಿಲ್ಲವಾದ್ದರಿಂದ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳಲಾಗಲಿಲ್ಲ. ಇಲ್ಲಿಂದಲೇ ದೇವಸ್ಥಾನದ ಕೋಯಿಲ್ ಕೆಲ್ವಿಯಾಗಿ ಜೀಯರರ ಪ್ರವೇಶವಾಯಿತು.

(g) ವಿಶ್ವಸ್ಥಮಂಡಲಿ ಸ್ಥಾಪನೆ -- ಇದರಲ್ಲಿ ಇಬ್ಬರು ತಾತಾಚಾರ್ಯರ ಮನೆತನದ ಪುತ್ರರು ಹಾಗೂ ಧರ್ಮದತ್ತಿ ಇಲಾಖೆಯ ಒಪ್ಪಿಗೆ ಮೇರೆಗೆ ಸ್ಮಾರ್ತ/ಮಾಧ್ವ ಬ್ರಾಹ್ಮಣರು ಮೂರನೆ ಸದಸ್ಯರಾಗಿ ನೇಮಕ.

(h) ೧೬೩೦ ರಲ್ಲಿ ಮತ್ತೊಮ್ಮೆ ತಿರುಪತಿ ಆನಂದ ನಿಲಯಕ್ಕೆ ಚಿನ್ನದ ರೇಕು ಹಾಕಿಸಿದರು. ಒಂದೆರಡು ವರ್ಷಗಳು ಅಲ್ಲೇ ತಂಗಿದ್ದು ಶ್ರೀನಿವಾಸನ ಸೇವೆಯನ್ನು ಮಾಡುತ್ತಾ ಕಂಚಿಗೆ ಮರಳಿ ಬರುವಾಗ ಚಂದ್ರಗಿರಿಯಲ್ಲಿ ೧೬೩೨ ರಲ್ಲಿ ಪರಮಪದಿಸಿದರು.

ಇವರ ನಂತರ ಬಂದವರು ಏಟೂರ್ ಇಮ್ಮಡಿ ಲಕ್ಷ್ಮೀಕುಮಾರ ತಿರುಮಲೈ ತಾತಾಚಾರ್ಯರು. ಪೂರ್ವಾಚಾರ್ಯರು ಹಾಕಿಕೊಟ್ಟ ಪಥದಲ್ಲೇ ಇವರು ಮುಂದವರೆದರು.

ನಡುಬಾವಿ, ಕೊಳ, ಇಮ್ಮಡಿ ಮುಂತಾದ ಪದಗಳು ಬಳಕೆಯಲ್ಲಿದ್ದುದನ್ನು ಗಮನಿಸಿದರೆ ತಾತಾಚಾರ್ಯರಿಗೆ ಕನ್ನಡ ಭಾಷೆಯೂ ತಿಳಿದಿತ್ತು ಎಂದು ತೋರುತ್ತದೆ. ಸಂಗಮ ವಂಶದ ಇಮ್ಮಡಿ ದೇವರಾಯನನ್ನು ಕುಮಾರ ತಾತ ಅಯ್ಯಂಗಾರ್ಯರು 'ಗಜಬೇಟೆಗಾರ' ಎಂದು ಹೊಗಳಿರುತ್ತಾರೆ. ಇವನು ವರದರಾಜಸ್ವಾಮಿಯ ನೈವೇದ್ಯಕ್ಕಾಗಿ ೪೦೦ ಪಣಗಳನ್ನು ಕೊಟ್ಟಿರುತ್ತಾನೆ. ಮೈಸೂರು ರಾಜರ ಸಂಪರ್ಕದಿಂದ ತಾತಾಚಾರ್ಯರಿಗೆ ಕನ್ನಡ ಭಾಷೆ ಅನಿವಾರ್ಯವಾಗಿರಬೇಕು. ಮೈಸೂರು ರಾಜರಿಂದ ಯಥೇಚ್ಛವಾಗಿ ದ್ರವ್ಯಸಹಾಯ ಒದಗಿದ್ದಲ್ಲದೇ ಉತ್ಸವಗಳಿಗಾಗಿ ಹಂಸ ಹಾಗೂ ಸಿಂಹವಾಹನಗಳು ಪ್ರಾಪ್ತವಾ

ದುವು. ಹಲವಾರು ವರ್ಷಗಳು ಮೈಸೂರು ರಾಜರ ಸಮ್ಮುಖದಲ್ಲೇ ಸುಪ್ರಸಿದ್ಧವಾದ ಗರುಡೋತ್ಸವವು ಜರುಗುತ್ತಿತ್ತು. ಮುಮ್ಮಡಿ ಕೃಷ್ಣರಾಜ ಒಡೆಯರು ಕಲ್ಯಾಣಕೋಟಿ ವಿಮಾನಕ್ಕೆ ೩ ಬಾರಿ ಚಿನ್ನದ ರೇಕು ಹಾಕಿಸಿದ್ದಾರೆ. ಇವರ ನಿಧನದಿಂದ ತಾತಾಚಾರ್ಯ -- ಮೈಸೂರು ಸಂಪರ್ಕ ಕೊನೆಗೊಂಡಿತು.

ಬ್ರಿಟಿಷರು ತಾತಾಚಾರ್ಯರನ್ನು 'ಬ್ರಾಹ್ಮಣರು' ಎಂದು ಕರೆಯುತ್ತಿದ್ದರು. ತಾತಾಚಾರ್ಯರ ಧ್ಯೇಯೋದ್ದೇಶಗಳು, ಸಾಧನಗಳು, ನಿಷ್ಕಪಟವಾದ ಕ್ರಿಯೆ ಚಲನ-ವಲನಗಳನ್ನು ಗಮನಿಸಿದ ಬ್ರಿಟಿಷರಿಗೆ ಒಳ್ಳೆ ಅಭಿಪ್ರಾಯವಿತ್ತು. ಹಲವಾರು ಬಾರಿ ನ್ಯಾಯಾಲಯಗಳು ಇವರ ಪರವಾಗಿ ತೀರ್ಪಿತ್ತಿದ್ದು ಬ್ರಿಟಿಷರ ಸಹಾನುಭೂತಿಗೆ ಕಾರಣವಾಯಿತು. ದಳವಾಯಿ ಅಗ್ರಹಾರಂ ಅನುದಾನದಲ್ಲಿ ಬ್ರಿಟಿಷರು ತಾತಾಚಾರ್ಯರನ್ನು 'ornament of the wise' ಎಂದು ಹೇಳಿರುತ್ತಾರೆ. ರಾಬರ್ಟ್ ಕ್ಲೈವ್ ಕಂಚಿಗೆ ಬಂದಿದ್ದು, ಉತ್ಸವರ ಸೊಬಗನ್ನು ನೋಡಿ ವಿಸ್ಮಿತನಾಗಿ ಮಕರಕಾಂತಿ ಪದಕವನ್ನು ಸಮರ್ಪಿಸಿದ್ದು ತಾತಾಚಾರ್ಯರ ಪ್ರಭಾವದಿಂದಲೇ!

ತಾತಾಚಾರ್ಯರ ಅಮೋಘ ಸೇವೆಗಳು ಇಡೀ ದಕ್ಷಿಣ ಭಾರತದಲ್ಲಿ ಅದರಲ್ಲೂ ಆಂಧ್ರತಮಿಳುನಾಡಿನಲ್ಲಿ ಪ್ರಶಂಸಿಸಲ್ಪಟ್ಟಿವೆ ಹಾಗೂ ಎಲ್ಲೆಡೆಗಳಲ್ಲಿ ಪ್ರಭಾವ ಬೀರಿ ಕಂಚಿ ಕುಂಭಕೋಣ ತಿರುಪತಿ ಶ್ರೀರಂಗ ಮುಂತಾದ ದಿವ್ಯಕ್ಷೇತ್ರಗಳಲ್ಲಿ ಶಾಸನಗಳನ್ನು ನೋಡಬಹುದು.

೧) ಕಂಠೀರವ ನರಸರಾಜ ಒಡೆಯರು ಚೊಟ್ಟೈ ಕುಮಾರ ತಾತ ಅಯ್ಯಂಗಾರ್ಯರ ಸಮುಖದಲ್ಲಿ ವೆಂಕಟೇಶ್ವರ ಸ್ವಾಮಿಯ ಕೊಡೈತಿರುನಾಳ್ ಉತ್ಸವದಂದು ಅತಿರಸ ನಿವೇದನಕ್ಕಾಗಿ ಹಾಕಿದ ದತ್ತಿ.

೨) ಏಟೂರು ಚೊಟ್ಟೈ ತಿರುಮಲೆ ನಂಬಿ ಶ್ರೀನಿವಾಸ ತಾತೈಯ್ಯಂಗಾರ್ಯರು ತಿರುಪತಿ ದೇವರಿಗಾಗಿ ಅಲಂಕಾರ ತಿರುಪ್ಪಾನಕಂ ಎಂಬ ನಿವೇದನೆಗಾಗಿ ದತ್ತಿ.

೩) ಏಟೂರು ಚೊಟ್ಟೈ ತಿರುಮಲೈನಂಬಿ ಕುಮಾರ ತಾತ ಅಯ್ಯಂಗಾರ್ಯರು ತಿರುಮಲೈಯಲ್ಲಿ ವೇದಪಾರಾಯಣೋತ್ಸವ ಹಾಗೂ ತಣ್ಣೀರ್‌ಮುದು ಉತ್ಸವಕ್ಕೆ ಹಾಕಿದ ದತ್ತಿ.

೪) ಏಟೂರು ತಿರುಮಲೈ ಕುಮಾರ ತಾತಾಚಾರ್ಯ(ತೋಳಪ್ಪಾಚಾರ್ಯರ ಮೊಮ್ಮಗ ಅಯ್ಯವಯ್ಯಂಗಾರ್ಯರ ಮಗ) ತಿರುಪತಿ ದೇವರಿಗಾಗಿ ವೀಳೆದೆಲೆ ಅಡಿಕೆ ಚಂದನ ಹಾಗೂ ಪೊಂಗಲ್ ನಿವೇದನಕ್ಕಾಗಿ ಅಕ್ಕಿಕೊಳ್ಳಲು ಶಾಶ್ವತವಾಗಿ ವರಮಾನ ಬರುವಂತೆ ಭೂಮಿ ಹಾಗೂ ೪ ಗ್ರಾಮಗಳನ್ನು ದಾನವಾಗಿ ಕೊಟ್ಟಿದ್ದು -- ಇತ್ಯಾದಿ.

ಶ್ರೀ ವೈಷ್ಣವಧರ್ಮದ ಅಭಿವೃದ್ಧಿ ಹಾಗೂ ಪ್ರಸಾರ ಕಾರ್ಯಗಳಲ್ಲಿ ಈ ಮಹಾವಂಶದವರು ಅಮೋಘ ಸೇವೆಯನ್ನು ಮಾಡಿರುತ್ತಾರೆ. 'ತಾತಾಚಾರ್ಯರುಗಳಿಲ್ಲದಿದ್ದರೆ ಶ್ರೀ ವೈಷ್ಣವ ಮತ ಕರ್ಪೂರದ ಬೊಂಬೆ ಆಗುತ್ತಿತ್ತು' ಎಂದು ಅಪ್ಪಯ್ಯ--ದೀಕ್ಷಿತರ ಅನುಯಾಯಿಗಳಲ್ಲೊಬ್ಬರಾದ ಮಹಾಲಿಂಗ ಶಾಸ್ತ್ರಿಗಳು ಅಭಿಪ್ರಾಯಪಟ್ಟು ತಾತಾಚಾರ್ಯರ ಮನೆತನವನ್ನು ಶ್ಲಾಘಿಸಿದ್ದಾರೆ. ನವಾಳ್ ಪಾಕಂ ತಾತಾಚಾರ್ಯರ ಬೀಡಾಗಿದೆ. ವಿಖ್ಯಾತ ಅಯ್ಯಾದೇವನಾಥ ತಾತಾಚಾರ್ಯ ಹಾಗೂ ರಾಷ್ಟ್ರಪ್ರಶಸ್ತಿ ವಿಜೇತ ರಾಮಾನುಜ ತಾತಾಚಾರ್ಯರು ಇಲ್ಲಿಯವರೆ, ಬೆಂಗಳೂರಿನ ವಿದ್ವನ್ಮಣಿ ವೇದಾಂತ ಸಾರಜ್ಞ ಕೋಟಿಕನ್ನಿಕಾದಾನಂ ಕೃಷ್ಣ ತಾತಾಚಾರ್ಯ ಜಯನಗರದ ಸ್ವಾಮಿಗಳೆಂದೇ ಪ್ರಸಿದ್ಧಿಹೊಂದಿದ್ದಾರೆ. ತಮಿಳು ನಾಡಿನ ಯಾವುದೇ ಯತಿಗಳು ಬೆಂಗಳೂರಿಗೆ ಬಂದರೆ ಇವರನ್ನು ಭೇಟಿಮಾಡದೆ ಹೋಗುವುದಿಲ್ಲ. ಹೀಗೆ ವೈದಿಕ ಪ್ರಪಂಚದಲ್ಲಿ ವೇದವಿದರಾಗಿ ಶಾಸ್ತ್ರವೇತ್ತರರಾಗಿಯೂ ಹಾಗೂ ಪೂರ್ವಜರ ಪುಣ್ಯವಿಶೇಷದಿಂದ ಲೌಕಿಕ ಪ್ರಪಂಚದಲ್ಲಿಯೂ ಉನ್ನತಹುದ್ದೆಗಳಲ್ಲಿ ಅಧಿಕಾರಿಗಳಾಗಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಜೀವಿಸಿರುತ್ತಾರೆ.

ಯಾವುದೇ ಶುಭ ಸಮಾರಂಭಗಳಲ್ಲಾಗಲಿ ಅಥವ ವಿದ್ವತ್ಸಭೆ / ಗೋಷ್ಠಿಯಲ್ಲಾಗಲಿ ತಾತಾಚಾರ್ಯರು ಉಪಸ್ಥಿತರಾಗಿದ್ದರೆ ಅವರಿಗೆ ಪ್ರಥಮ ಮರ್ಯಾದೆ ಸಲ್ಲಿಸುವ ವಾಡಿಕೆ ಈಗಲೂ ಇದೆ. ಕಂಚಿ ವರದನ ಸನ್ನಿಧಿಯಲ್ಲಿ ಪ್ರಥಮ ಹಾಗೂ ದ್ವಿತೀಯ ಮರ್ಯಾದೆಗಳು ತಾತಾಚಾರ್ಯರಿಗೇ.

ತಾತದೇಶಿಕರ ಅಮೋಘ ಸೇವೆಯ ಸಾಂಕೇತಿಕವಾಗಿ ಇವರ ಹಾಗೂ ಇವರ ಪತ್ನಿ ಅಮ್ಮಂಗಾರು ವಿಗ್ರಹಗಳು ದೇವಸ್ಥಾನದಲ್ಲಿರುವ ವೇದಾಂತದೇಶಿಕರ ಸನ್ನಿಧಿಯಲ್ಲಿ ಪ್ರತಿಷ್ಠಿತವಾಗಿರುತ್ತೆ. ದೇವಸ್ಥಾನದ ಗೋಡೆಗಳ ಮೇಲೆಯೂ ಲಕ್ಷ್ಮೀಕುಮಾರ ತಾತದೇಶಿಕರ ಜೀವನ ಚರಿತ್ರೆಯನ್ನು ನೋಡಬಹುದು. ಕಾರ್ತಿಕಮಾಸದಲ್ಲಿ ೧೦ ದಿನಗಳು ಜರುಗುವ 'ಶಾತ್ತುಮೊರೈ' ಉತ್ಸವದಲ್ಲಿ ಪ್ರತಿದಿನ ವರದರಾಜರ ಉತ್ಸವ ಇಲ್ಲಿಗೆ ಬಿಜಯಮಾಡಿಸಿ, ವೇದಾಂತದೇಶಿಕರು ಮತ್ತು ತಾತದೇಶಿಕ ದಂಪತಿಗಳಿಗೆ ಸೇವೆ ಕೊಟ್ಟು ಶಾತ್ತುಮೊರೈ ತೀರ್ಥ ಶಠಾರಿ ಮುಂತಾದ ಮರ್ಯಾದೆಗಳೂ ಜರುಗುವವು.

* * * * * * * *

## ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಿಗೆ ಉತ್ಸವಾದಿಗಳಲ್ಲಿ ಬಳಸಲು ಆಲಯೋಪಯೋಗಿ ಕೊಡೆಗಳನ್ನು (ಶ್ವೇತ ಛತ್ರಗಳು) ರಿಯಾಯಿತಿ ದರಗಳಲ್ಲಿ ನೀಡಲು ತೀರ್ಮಾನಿಸಲಾಗಿದ್ದು, ಈ ಯೋಜನೆಯಂತೆ ವಿವಿಧ ದೇವಾಲಯಗಳವರು ಕೊಡೆಗಳಿಗಾಗಿ 50 ಶತಾಂಶ ರಿಯಾಯಿತಿಯ ಹಣ ರೂ. 1000/- ವನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಬ್ಯಾಂಕ್ ಡಿ.ಡಿ.ಯ ರೂಪದಲ್ಲಿ ಕಳುಹಿಸುತ್ತ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ದೇವಾದಾಯ (ಮುಜರಾಯಿ) ಕಮಿಷನರ್ ಮೂಲಕವಾಗಿ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಿದಲ್ಲಿ ಮಾತ್ರವೇ ನೀಡಲಾಗುವುದು. ಕೊಡೆಗಳನ್ನು ತಿರುಪತಿಯಿಂದ ಆಯಾ ದೇವಾಲಯಗಳವರೇ ಕೊಂಡೊಯ್ಯಬೇಕಾಗುವುದು.

ವಿವರಗಳಿಗಾಗಿ ಬರೆಯಿರಿ:---ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ. ತಿರುಪತಿ.

## ಧ್ವನಿವರ್ಧಕ ವಿತರಣಾಯೋಜನೆ

ವಿವಿಧ ಹಿಂದೂ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರಕ್ಕಾಗಿ ತಿ. ತಿ.ದೇ. ಗಳ ವತಿಯಿಂದ ಧ್ವನಿವರ್ಧಕಗಳನ್ನು ರಿಯಾಯಿತಿ ದರದಲ್ಲಿ ನೀಡುವ ಯೋಜನೆಯಿದೆ. 50 ಶತಾಂಶ ರಿಯಾಯಿತಿಯಲ್ಲಿ ನೀಡಲಾಗುವ ಧ್ವನಿವರ್ಧಕಗಳಿಗಾಗಿ ದೇವಾಲಯಗಳವರು ನೀಡಬೇಕಾದ ಮೊತ್ತ ರೂ. 3370/- ಈ ಹಣಕ್ಕೆ ಬ್ಯಾಂಕ್ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಯ ಅಸಿಸ್ಟೆಂಟ್ ಮುಜರಾಯಿ ಕಮಿಷನರ್ ಅವರ ಮೂಲಕ ತಮ್ಮ ಅರ್ಜಿಗಳನ್ನು ಕಳುಹಿಸಬಹುದು.

ವಿವರಗಳಿಗಾಗಿ ಬರೆಯಿರಿ:

**---ಕಾರ್ಯನಿರ್ವಹಣಾಧಿಕಾರಿ,**

ತಿ.ತಿ.ದೇ. ತಿರುಪತಿ.

ಸಂದರ್ಶಿಸಿ

ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಅನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ**

**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**

**,, ೦--೫೦ (ಕಿರಿಯರಿಗೆ)**

# ಸುಮಧ್ವವಿಜಯ

---ಕೃಷ್ಣ ಹುನಗುಂದ.

ಭಾರತೀಯ ಸಾಹಿತ್ಯದಲ್ಲಿ ಸಂಸ್ಕೃತ ಸಾಹಿತ್ಯದ ಪ್ರಭಾವ ಅಪಾರವಾದದ್ದು, ಅಗಾಧವಾದದ್ದು. ಸಂಸ್ಕೃತ ಸಾಹಿತ್ಯದ ಈ ತೆರನಾದಂಥ ಪ್ರಭಾವ ನಮ್ಮ ಮೇಲೆ ಆಗಿರದೇ ಹೋಗಿದ್ದರೇ, ನಾವು ಪ್ರಾಯಃ ಇನ್ನೂ ಅಜ್ಞಾನದಲ್ಲಿ ಮುಳುಗಿರುತ್ತಿದ್ದೆವೇನೋ.

ಸಂಸ್ಕೃತ ಕಾವ್ಯ ಸಾಹಿತ್ಯದಲ್ಲಿ ಭಾಸ, ಕಾಳಿದಾಸ, ಬಾಣ, ಶ್ರೀಹರ್ಷ ಮುಂತಾದವರು ಮಾಡಿದ ಅಮೋಘ ರಚನಾ ಶಕ್ತಿಯೇ ಒಂದಾದರೆ, ಇದಕ್ಕಿಂತ ಹೆಚ್ಚು ಶ್ರೇಷ್ಠ ಮಟ್ಟದ ಕಾವ್ಯರಚನೆಯನ್ನು ಪ್ರಸ್ತುತ ಲೇಖನದ ಕರ್ತೃಗಳಾದ ಶ್ರೀಮನ್ನಾರಾಯಣ ಪಂಡಿತಾಚಾರ್ಯರು ಮಾಡಿದ್ದಾರೆ, ಶ್ರೀಸುಮಧ್ವ ವಿಜಯ ಕಾವ್ಯದಲ್ಲಿ.

ಇಲ್ಲಿ ಮುಖ್ಯವಾಗಿ "ಕಾವ್ಯ"ವೆಂದು ಯಾವುದಕ್ಕೆ ಹೇಳುತ್ತಾರೆ? ಕಾವ್ಯದ ಉದ್ದೇಶವೇನು? ಎಂಬುದರ ಬಗ್ಗೆ ತಿಳಿದುಕೊಳ್ಳುವುದು ಅವಶ್ಯಕವೆನಿಸುತ್ತದೆ. ಕಾವ್ಯ ಅಂದರೆ "ರಮಣೀಯಾರ್ಥ ಪ್ರತಿಪಾದಕ ಶಬ್ದಃ ಕಾವ್ಯಂ" ಎಂದು ರಸಗಂಗಾಧರದ ಹೇಳಿಕೆ. ಇನ್ನು ಕಾವ್ಯದ ಉದ್ದೇಶ ಆನಂದವನ್ನುಂಟು ಮಾಡುವುದು, ಮತ್ತು ಕಾವ್ಯದ ಉದ್ದೇಶ ಹೃದಯಸ್ಪರ್ಶಿಯೂ ಆಗಿರಬೇಕು.

ಕಾಳಿದಾಸ, ಬಾಣ, ಮುಂತಾದವರ ಕಾವ್ಯಗಳಲ್ಲಿ ಮೇಲೆ ಹೇಳಿದ ಗುಣಗಳು ಕಂಡುಬರುವುವಾದರೂ, ಅದು ಕಾವ್ಯಾಸ್ವಾದನೆಯ ಸಮಯದಲ್ಲಿ ಮಾತ್ರ. ಆದರೆ ಪ್ರಸ್ತುತ "ಶ್ರೀಸುಮಧ್ವ ವಿಜಯ" ಮಹಾಕಾವ್ಯವು ಕಾವ್ಯದ ರಂಜಕ ಶಬ್ದಗಳ ಸಮೂಹವನ್ನು ಒಳಗೊಂಡಿದೆಯಲ್ಲದೇ ಶಾಸ್ತ್ರಗ್ರಂಥಗಳ ಖಣಿಯೂ ಆಗಿದೆ. ಈ ಶ್ರೀಸುಮಧ್ವ ವಿಜಯವು ಕಾವ್ಯವೂ ಹೌದು, ಶಾಸ್ತ್ರವೂ ಹೌದು. "ಶ್ರೀಸುಮಧ್ವವಿಜಯ" ಗ್ರಂಥದ ಪರಿಚಯ ಮಾಡಿಕೊಳ್ಳುವ ಮೊದಲು ಅದರ ಕರ್ತೃಗಳಾದ ಶ್ರೀಮನ್ನಾರಾಯಣ ಪಂಡಿತಾಚಾರ್ಯರ ಪರಿಚಯ ಮಾಡಿಕೊಳ್ಳುವುದು ಅವಶ್ಯಕ. ಯಾಕೆಂದರೆ ಯಾವುದೇ ಒಂದು ಕಾವ್ಯ ಅಥವಾ ಗ್ರಂಥದಲ್ಲಿ ನಮಗೆ ಗೌರವ, ಆದರ, ನಂಬಿಕೆ, ಹೆಚ್ಚಾಗಲೂ ಅದರ ಕರ್ತೃವೇ ಕಾರಣ. ಪಾಶ್ಚಿಮಾತ್ಯ ಕವಿಗಳಂತೆ ನಮ್ಮ ಕವಿಗಳೂ ತಮ್ಮ ಜೀವನ ಚರಿತ್ರೆಯನ್ನು ಬರೆದುಕೊಳ್ಳುವುದು ತೀರಾ ಕಡಿಮೆ. ಆದರೆ "ಶ್ರೀಸುಮಧ್ವ ವಿಜಯ" ಕಾವ್ಯದ ನಾಯಕರಾದ ಶ್ರೀಮನ್‌ಮಧ್ವಾಚಾರ್ಯರು ಜನರಿಗೆ ಗೋಚರವಾದಾಗ, ಪ್ರಸ್ತುತ ಕಾವ್ಯದ ಕರ್ತೃಗಳು ಬಾಲ್ಯಾವಸ್ಥೆಯಲ್ಲಿದ್ದರೆಂದು ತೋರುತ್ತದೆ. ಶ್ರೀಮನ್ನಾರಾಯಣ ಪಂಡಿತಾಚಾರ್ಯರು ತಮ್ಮ ಚರಿತ್ರೆಯ ಬಗ್ಗೆ ಒಂದೆರಡು ಶ್ಲೋಕಗಳನ್ನು ಮಾತ್ರ ಹೇಳಿ, ಉಳಿದೆಲ್ಲವನ್ನೂ ಕಥಾನಾಯಕರ ಚರಿತ್ರೆ, ಹರಿಗುರುಗಳ ಭಕ್ತಿಗಾಗಿಯೇ ಕಾವ್ಯರಚನೆಗೆ ತೊಡಗಿದ್ದಾರೆ. ಅವರು ತಮ್ಮ ಭಾವಪ್ರಕಾಶಿಕಾ ಗ್ರಂಥದಲ್ಲಿ ತಮ್ಮ ತಂದೆ ತ್ರಿವಿಕ್ರಮ ಪಂಡಿತಾಚಾರ್ಯರ ಬಗ್ಗೆ ಉಲ್ಲೇಖಿಸುತ್ತಾ ---

"ತ್ರಿವಿಕ್ರಮ ವಿಪಶ್ಚಿತೋ
ಗುಣನಿಧೇಃ ಸುಶಿಷ್ಯಾಃ ಸುತಾಃ
ಸತಾಭಿಮತಾಸ್ತಯೋ
ಯಸ್ತ್ರತೀಯೋಽತ್ರ ನಾರಾಯಣಃ"

ಎಂದು ಹೇಳಿದ್ದಾರೆ. ಶ್ರೀಮನ್‌ಮಧ್ವಾಚಾರ್ಯರ ಜತೆ ೧೫ ದಿನಗಳ ಕಾಲ ವಾದ ಮಾಡಿ ಸೋತು ಕೊನೆಗೆ---

ಪ್ರಣಮ್ಯಾ ಚ ಪ್ರಶಿಷ್ಯೋ ಸೌ,
ಕ್ಷಮ್ಯಥಾ ನಾಥ ಚಾಪಲಂ
ಪದಪದ್ಮರಜೋ ದಾಸ್ಯಂ
ಧ್ರುವಂ ಮೇ ದಿಯತಾ ಮಿತಿ.... ಎಂದರು.
(ಸುಮಧ್ವ ವಿಜಯ)

ಗುರುಗಳಾದ ಶ್ರೀಮದಾಚಾರ್ಯರು ತಮ್ಮ ಭಾಷ್ಯಕ್ಕೆ ಟೀಕಾ ರಚಿಸುವಂತೆ ಆಜ್ಞೆಮಾಡಿದರು. ಶಿರಸಾವಹಿಸಿದ ತ್ರಿವಿಕ್ರಮ ಪಂಡಿತಾಚಾರ್ಯರು "ತತ್ವಪ್ರದೀಪ" ವೆಂಬ ಗ್ರಂಥ ರಚಿಸಿ ಸಜ್ಜನರಿಗೆ ಉಪಕಾರ ಮಾಡಿದ್ದಾರೆ. ಈ ಕಲಿಕುಲತಿಲಕರ ಮೂರನೇ ಮಕ್ಕಳೇ ಶ್ರೀಮನ್ನಾರಾಯಣ ಪಂಡಿತಾಚಾರ್ಯರು. ತಂದೆಯಂತೆಯೇ ಕಾವ್ಯರಚನಾ ಕೌಶಲ್ಯ ವೇದ ಪಾಂಡಿತ್ಯಗಳು ನಾರಾಯಣ ಪಂಡಿತಾಚಾರ್ಯರಲ್ಲಿ ಸಹಜವಾಗಿ ಬಂದವು.

ಮಹಾಜ್ಞಾನಿಗಳಾದ ನಾರಾಯಣ ಪಂಡಿತಾಚಾರ್ಯರು "ಶ್ರೀಸುಮಧ್ವ ವಿಜಯ" ವೆಂಬ ಆಚಾರ್ಯರ ಅವತಾರ ಲೀಲೆಗಳನ್ನು ವಿಷದಪಡಿಸುವ ಪ್ರೌಢಶೈಲಿಯ ಮಹಾಕಾವ್ಯ. ಮಂತ್ರ ಪುರಸ್ಸರ ವಾದ, ಪಾರಾಯಣ ಮಾಡುವ ನಿತ್ಯಗ್ರಂಥ ಎಂಬ ಮನ್ನಣೆ ಜ್ಞಾನಿಗಳಿಂದ ಪ್ರಶಂಸೆ ಪಡೆದಿದೆ. ಇಂಥ ಮಹಾಕಾವ್ಯ ರಚಿಸಿದ್ದರೂ ಕೂಡ ತಾವು "ಸಂಕ್ಷಿಪ್ತ ವಾಕ್ಯೇ ಮಯಿ ಮಂದ ಬುದ್ಧೌ" ಎಂದು ಹೇಳಿಕೊಳ್ಳುವ ವಿನಯಶೀಲರು. ಇಂಥ "ಶ್ರೀಸುಮಧ್ವ ವಿಜಯ" ಮಹಾಕಾವ್ಯದ ಕರ್ತೃಗಳು ನಾರಾಯಣ ಪಂಡಿತಾಚಾರ್ಯರು.

"ಶ್ರೀಸುಮಧ್ವ ವಿಜಯ" ಮಹಾಕಾವ್ಯದಲ್ಲಿ ಪ್ರಧಾನವಾಗಿ ನಿರೂಪಿತವಾದದ್ದು ಶ್ರೀಮನ್‌ಮಧ್ವಾಚಾರ್ಯರ ಜೀವನ ಹಾಗೂ ಅವರ ಗ್ರಂಥಗಳ ಪರಿಚಯ. ಅಲ್ಲದೇ ಆಗಿನ ಕಾಲದಲ್ಲಿದ್ದ ಧಾರ್ಮಿಕ ವಾತಾವರಣ, ಜನರ ಬದುಕಿನ ರೀತಿ, ನೀತಿಗಳು, ವೈಕುಂಠ ವರ್ಣನೆ, ನಿಸರ್ಗದ ವರ್ಣನೆ, ಕಾವ್ಯದ ಎಲ್ಲ ಲಕ್ಷಣಗಳೂ ಇದರಲ್ಲಿ ತುಂಬಿ ತುಳುಕಿವೆ. ಇಡೀ ಮಾಧ್ವ ಸಮುದಾಯದಲ್ಲಿ ಅತ್ಯಂತ ಜ್ಞಾನಿಶ್ರೇಷ್ಠರಿಂದ ಗೌರವಿಸಲ್ಪಟ್ಟ ಗ್ರಂಥ ಶ್ರೀಸುಮಧ್ವ ವಿಜಯ ಮಾಹಾಕಾವ್ಯ. ಶ್ರೀಮದ್ ಜಯತೀರ್ಥರಿಂದಾರಂಭವಾಗಿ, ಇತ್ತೀಚೆಗಿನ ಯತಿಗಳು ಅನೇಕ ಪ್ರೌಢ ಗ್ರಂಥಗಳನ್ನು ರಚಿಸಿದ್ದರೂ "ಶ್ರೀಸುಮಧ್ವ ವಿಜಯ"ದ ತರಹ ಮತ್ತೊಂದು ಕಾವ್ಯರಚನೆಗೆ ಕೈಹಾಕದಿರುವುದು, ಈ ಮಹಾಕಾವ್ಯದ ಮಹಿಮೆಯನ್ನು ಎತ್ತಿ ತೋರಿಸುತ್ತದೆ.

ಈ 'ಶ್ರೀಸುಮಧ್ವ ವಿಜಯ'ಕ್ಕೆ ಸ್ವತಃ ಗ್ರಂಥಕರ್ತೃರೇ "ಪ್ರಮೇಯ ನವಮಾಲಿಕಾ" (ಅಣುಮಧ್ವ ವಿಜಯ) ಮತ್ತು ಭಾವಪ್ರಕಾಶಿಕಾ ಎಂಬ ಚಿಕ್ಕ ಗ್ರಂಥವನ್ನು ರಚನೆಮಾಡಿದ್ದಾರೆ.

ಈ ಮಹಾನುಭಾವರ ಕಾವ್ಯಶಕ್ತಿ ಎಂಥಹುದು? ಇದರ ಅಭ್ಯಾಸದ ಪಾರಾಯಣದ ಫಲ ಎಂಥಹುದು? ಎಂಬುದಕ್ಕೆ ನಮಗೆ ಸ್ಪಷ್ಟವಾದ ಪ್ರಮಾಣಗಳು ಸಿಗುತ್ತದೆ. ಕಲಿಯುಗದ ಕಾಮಧೇನು, ಕಲ್ಪವೃಕ್ಷ ಎಂದೇ ಪ್ರಖ್ಯಾತರಾಗಿ, ಮಂತ್ರಾಲಯದಲ್ಲಿ ಸಶರೀರರಾಗಿ ವೃಂದಾವನಸ್ಥರಾಗಿರುವ ಮಹಾಮಹಿಮ ರಾಘವೇಂದ್ರ ಗುರು ಸಾರ್ವಭೌಮರು, ತಮ್ಮ ಪೂರ್ವಾಶ್ರಮದಲ್ಲಿ "ಅಣುಮಧ್ವ ವಿಜಯಕ್ಕೆ" ವ್ಯಾಖ್ಯಾನವನ್ನು ರಚನೆ ಮಾಡಿದ್ದಾರೆ. ಅದರಿಂದ ಪ್ರೀತರಾದ ಶ್ರೀಮದಾಚಾರ್ಯರು ವೇದಾಂತ ಸಾಮ್ರಾಜ್ಯದಲ್ಲಿ ಶ್ರೀ ರಾಮರನ್ನು ಪಟ್ಟಾಭಿಷೇಕ ಮಾಡಿದರೆಂತಲೂ ಮತ್ತು ತಮ್ಮ ಪತಿಯನ್ನು ಪ್ರೀತಿಪಡಿಸಿದ ಶ್ರೀ ರಾಘವೇಂದ್ರಸ್ವಾಮಿಗಳನ್ನು ಭಾರತೀದೇವಿಯರೂ ಪರಮಾನುಗ್ರಹ ಮಾಡಿ "ಪರಿಮಳ"ದಂಥ ಅಮೂಲ್ಯಕೃತಿ ರಚನೆಗೆ ಪ್ರೇರಕ ಶಕ್ತಿಯಾದರೆಂದು ವಾದೀಂದ್ರತೀರ್ಥ ಯತಿಗಳು ತಮ್ಮ "ಗುರುಗುಣಸ್ತವನ"ದಲ್ಲಿ ಹೇಳಿ ಈ ಮಹಾಕಾವ್ಯದ ಹಿರಿಮೆ ಕೊಂಡಾಡಿದ್ದಾರೆ.

"ಶ್ರೀಸುಮಧ್ವ ವಿಜಯ" ಮಹಾಕಾವ್ಯವು ಒಟ್ಟು ಹದಿನಾರು (೧೬) ಸರ್ಗಗಳಿಂದೊಡಗೂಡಿವೆ. ಒಂದು ಮತ್ತು ಎರಡನೇ ಸರ್ಗಗಳಲ್ಲಿ ಕೆಲವು ಭಾಗಗಳು ಶ್ರೀಮದಾಚಾರ್ಯರ ಮುಂಚಿನ ದಿನಗಳ ಪರಿಸ್ಥಿತಿಯನ್ನು ಸೂಚಿಸಿವೆ. ಎರಡು ಮತ್ತು ಮೂರನೇ ಸರ್ಗಗಳಲ್ಲಿ ಆಚಾರ್ಯರ ಬಾಲ್ಯ ವಿದ್ಯಾಭ್ಯಾಸಗಳು, ನಾಲ್ಕನೇ ಸರ್ಗದಲ್ಲಿ ಸನ್ಯಾಸ ಸ್ವೀಕಾರ, ಐದು ಮತ್ತು ಆರನೇ ಸರ್ಗಗಳಲ್ಲಿ ಶ್ರೀಮದಾಚಾರ್ಯರ ಅಭಿಷೇಕ, ವಾದಿಗಳ ಜತೆಯಲ್ಲಿ ಜಯಶೀಲತೆ, ದಕ್ಷಿಣ ಭಾರತದಲ್ಲಿ ದಿಗ್ವಿಜಯ ಮತ್ತು ವೇದವ್ಯಾಖ್ಯಾನದಲ್ಲಿ ಆಚಾರ್ಯರು ಮನಸ್ಸು ಮಾಡಿದ್ದು, ನಂತರ ಗೀತಾಭಾಷ್ಯ ರಚನೆ, ಉತ್ತರ ದಿಗ್ವಿಜಯ, ಬದರಿಕಾಶ್ರಮ ಪ್ರವೇಶ, ಇವುಗಳೆಲ್ಲ ವಿವಿಧ ವೃತ್ತಗಳಲ್ಲಿ ಸುಂದರವಾಗಿ ವರ್ಣಿತವಾಗಿವೆ.

ಏಳನೆಯ ಸರ್ಗದಲ್ಲಿ ಹಿಮವತ್ಪರ್ವತದಲ್ಲಿರುವ ಬದರಿ ಕ್ಷೇತ್ರದ ಸುಂದರ ವರ್ಣನೆಯಿದೆ. ಎಂಟನೇ ಸರ್ಗದಲ್ಲಿ ಶ್ರೀಮದಾಚಾರ್ಯರು ಮತ್ತು ವೇದವ್ಯಾಸರ ದರ್ಶನ ಸಂದರ್ಶನ, ನಂತರ ಶ್ರೀ ವ್ಯಾಸರ ಸಂದೇಶ ಪಡೆದು ಬದರಿಯಿಂದ ಪುನರಾಗಮನ. ಆವಾಗಲೇ ಸೂತ್ರಭಾಷ್ಯದ ನಿರ್ಮಾಣ, ಮತ್ತು ಉಡುಪಿಯಲ್ಲಿ ಮುದ್ದಾದ ಶ್ರೀ ಬಾಲಕೃಷ್ಣನ ಮೂರ್ತಿ ಪ್ರತಿಷ್ಠಾಪನೆ. ಪುನಃ ಬದರಿಗೆ ಹೋಗಿ ಶ್ರೀವೇದವ್ಯಾಸರಲ್ಲಿ ಸೂತ್ರಭಾಷ್ಯ ಸಮರ್ಪಣ ಮಾಡಿ, ಉಡುಪಿಗೆ ಹಿಂದಿರುಗುವಿಕೆ. ಮುಂತಾದ ವಿಷಯಗಳ ನಿರೂಪಣೆ. ಹತ್ತನೇ ಸರ್ಗದಲ್ಲಿ ಶ್ರೀಮದಾಚಾರ್ಯರು ತೋರಿದ ಪವಾಡಗಳು, ಹನ್ನೊಂದರಲ್ಲಿ ವೈಕುಂಠದ ಸುಂದರ ವರ್ಣನೆ, ೧೨ ನೇ ಸರ್ಗದಲ್ಲಿ ಈ ಹೊಸ ಧೀರೋದಾತ್ತ ಸನ್ಯಾಸಿಯ ತತ್ವವಾದ ನಾಶಮಾಡ ಹೊರಟ ಇತರ ವಾದಿಗಳ ಗುಪ್ತಾಲೋಚನೆ. ೧೩ ನೇ ಸರ್ಗದಲ್ಲಿ ಶ್ರೀಮದಾಚಾರ್ಯರ ಅಪಾದಮಸ್ತಕ ಭವ್ಯ ಶರೀರದ ಸುಂದರ ವರ್ಣನೆ ಇದೆ. ಎಂಟನೆಯ ಸರ್ಗದಲ್ಲಿ ಶ್ರೀಮನ್ನಾರಾಯಣನ ವರ್ಣನೆ ಮತ್ತು ಶ್ರೀಹರಿಯ ಮತ್ಸ್ಯಾದಿ ರೂಪಗಳ, ನಾನಾ ವರ್ಣನೆಯಿದೆ. ಇಲ್ಲಿಯ ಈ ಕಾವ್ಯದ ಸೌಂದರ್ಯ ಎಂಥವರನ್ನೂ ಬೆರಗುಗೊಳಿಸುತ್ತದೆ. ಮತ್ತು ರಾಜಾ ಜಯಸಿಂಹನಿಗೆ ಆಚಾರ್ಯರ ದರ್ಶನ, ಆಗಲೇ ಈ ಮಹಾಕಾವ್ಯದ ಕರ್ತೃಗಳ ತಂದೆಯವರಾದ ತ್ರಿವಿಕ್ರಮ ಪಂಡಿತಾಚಾರ್ಯರ ಜನನ, ಬಾಲ್ಯ, ಪಾಂಡಿತ್ಯಗಳು ವರ್ಣನೆ ಇದೆ.

ಹದಿನಾಲ್ಕನೇ ಸರ್ಗದಲ್ಲಿ ಶ್ರೀಮದಾಚಾರ್ಯರ ದಿನಚರಿ, ೧೫ ರಲ್ಲಿ ವಿಷ್ಣುಮಂಗಲದಲ್ಲಿ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರಿಗೂ, ಶ್ರೀಮದಾಚಾರ್ಯರಿಗೂ ನಡೆದ ವಾದವೈಖರಿ, ಆಚಾರ್ಯರ ಗ್ರಂಥಗಳ ಶ್ರೇಷ್ಠತೆ ಮತ್ತು ಉಪನ್ಯಾಸ ಭಾರತಿಯೂ ಹದಿನಾರನೇ ಸರ್ಗದಲ್ಲಿ ಸಮುದ್ರ ವರ್ಣನೆಯೂ ಅತ್ಯಂತ ರಮಣೀಯವಾಗಿ ಚಿತ್ರಿತವಾಗಿವೆ. ಶ್ರೀಮದಾಚಾರ್ಯರ ಮತ್ತು ಕೆಲವು ಪವಾಡಗಳು, ದೇವಾನುದೇವತೆಗಳು ಮಧ್ವವಿಜಯವನ್ನು ದೇವಸಭೆಯಲ್ಲಿ ಹಾಡಿದ್ದು, ಮಾನವರಿಗೆ ಅದೃಶ್ಯರಾಗಿ ಆಚಾರ್ಯರು ಬದರಿಗೆ ಹೋಗಿದ್ದು, ಮುಂತಾದ ವಿಷಯಗಳು ಹೇಳಲ್ಪಟ್ಟಿವೆ. ಒಟ್ಟು ಹದಿನಾರು ಸರ್ಗಗಳ ಸುಂದರ ಕಾವ್ಯದ, ಹೊನ್ನಿನ ಲೇಪನದ ಮಂಜರಿ ಈ "ಶ್ರೀಸುಮಧ್ವ ವಿಜಯ" ಮಹಾಕಾವ್ಯ

ಶ್ರೀ ಸೋದೆ ಮಠದ ಪರಂಪರೆಯ ಶ್ರೀಮದ್ವಾದಿರಾಜರ ತೀರ್ಥರ ನಂತರ ಏಳನೆಯವರಾದ ಶ್ರೀವೇದಾಂಗ ತೀರ್ಥರೆಂಬವರು ರಚಿಸಿರುವ ವ್ಯಾಖ್ಯಾನವೇ "ಶ್ರೀಸುಮಧ್ವ ವಿಜಯ"ಕ್ಕೆ ಅತೀ ಪ್ರಾಚೀನ ವ್ಯಾಖ್ಯಾನವಂತೆ. ನಂತರ ಶ್ರೀಮದಾಚಾರ್ಯರಿಂದ ೧೯ ನೇ ಯವರಾದ ಶ್ರೀ ಪೇಜಾವರ ಮಠದ ಶ್ರೀ ವಿಶ್ವಪತಿ ತೀರ್ಥರೂ ಶ್ರೀಸುಮಧ್ವ ವಿಜಯಕ್ಕೆ ವ್ಯಾಖ್ಯಾನ ರಚನೆ ಮಾಡಿದ್ದಾರೆ.

ಹೀಗೆ ಶ್ರೀ ರಾಘವೇಂದ್ರಸ್ವಾಮಿಗಳೇ ಮೊದಲಾದ ಮಹಾನುಭಾವರು ವ್ಯಾಖ್ಯಾನ ರಚಿಸಿರುವುದನ್ನು ನೋಡಿದರೆ, ಶ್ರೀಸುಮಧ್ವ ವಿಜಯ ಪಾರಾಯಣ, ನಿರಂತರ ಪಾಠ ಪ್ರವಚನ, ಮಾಡುವುದರಿಂದ ಗುರುಭಕ್ತಿ, ಮುಕುಂದ ಭಕ್ತಿ ವೃದ್ಧಿಯಾಗಿ, ಮುಂದಿನ ಸಾಧನೆ ಸುಗಮವಾಗುತ್ತದೆಂಬುದರಲ್ಲಿ ಸಂದೇಹವೇ ಇಲ್ಲ. ಯಾಕಂದರೆ ಸುಮಧ್ವವಿಜಯ ಕಾರರೇ ಹೇಳುವಂತೆ.

"ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ
ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ
ಸುರಾದ್ಯಾ ನರಾಂತಾ,
ಮುಕುಂದಪ್ರಸಾದಾದಿಮಂ
ಮೋಕ್ಷ ಮೇತೇ ಭಜಂತೇ ಸದೇತಿ"

|| ಶ್ರೀ ಕೃಷ್ಣಾರ್ಪಣಮಸ್ತು || 

# ವ್ಯಾಸರಾಯ ಪ್ರತಿಷ್ಠಿತ ಪ್ರಾಣದೇವರುಗಳು

---ದುರ್ಗ ಜಗದೀಶ.

ವ್ಯಾಸ ಪ್ರತಿಷ್ಠಿತ ಪ್ರಾಣದೇವರೆಂದರೆ ಭಕ್ತಾದಿಗಳಲ್ಲಿ ಎಲ್ಲಿಲ್ಲದ ಅಭಿಮಾನ. ಆಂಧ್ರದಲ್ಲಿ ಕೂಡ ಭಕ್ತಾದಿಗಳು "ಇದಿ ವ್ಯಾಸತೀರ್ಥ ಸ್ವಾಮಿವಾರು ಪ್ರತಿಷ್ಠಾಪಿಂಚಿಂದಿ." ಎಂದು ಅಭಿಮಾನದಿಂದ ತೋರಿಸುತ್ತಾರೆ. ವ್ಯಾಸ ಪ್ರತಿಷ್ಠಿತ ಪ್ರಾಣದೇವರೆಂದರೆ ಜಾಗೃತ ಆಂಜನೇಯ ಇಷ್ಟಾರ್ಥ ಸಿದ್ಧಿದಾಯಕ, ಭೂತ, ಪ್ರೇತ ಭಯ ಪರಿಹಾರಕ ಎಂದು ಭಕ್ತಾದಿಗಳಲ್ಲಿ ಅಚಲ ವಿಶ್ವಾಸ, ಆದರೆ ಅಭಿಮಾನ ಕೇವಲ ಅಭಿಮಾನವಾಗಿ ಉಳಿಯುತ್ತಿದೆ; ಬಾಲಕ್ಕೆ ಗಂಟೆ ಇದ್ದದ್ದು ಎಂದು ಮಾತ್ರ ಹೇಳುವರು. ಮಿಕ್ಕ ಲಕ್ಷಣಗಳು ಗೊತ್ತಿಲ್ಲ. ಪರೀಕ್ಷೆ ಮಾಡಲು ಆತ್ಮವಿಶ್ವಾಸವೂ ಇಲ್ಲ ಎನ್ನುವಂತಿದೆ ಸಾಧಾರಣ ಭಕ್ತಾದಿಗಳ ಪರಿಸ್ಥಿತಿ. ಗ್ರಂಥಗಳ ಆಧಾರ ಮೇಲೆ ಇದುವರೆಗೆ ಶ್ರೀ ವ್ಯಾಸ ತೀರ್ಥರು ಯಾವ ಸ್ಥಳಗಳಲ್ಲಿ, ಎಷ್ಟು ಸಂಖ್ಯೆಯಲ್ಲಿ ಸ್ಥಾಪನೆ ಮಾಡಿದರೆಂಬುವ ಬಗ್ಗೆ ಮಾಹಿತಿ ದೊರೆತಿಲ್ಲ. ಆದಕಾರಣ, ಇನ್ನು ಮೇಲೆ ಭಕ್ತಾದಿಗಳೇ ಶೋಧನೆ ಮಾಡಿ ಒಂದು ಪಟ್ಟಿ ತಯಾರಿಸಬೇಕಾಗಿದೆ. ವಿಜಯನಗರದ ಸಾಮ್ರಾಟರಿಂದ ಸಾಳ್ವ ತಿಮ್ಮರಾಯ, ನೃಸಿಂಹ ಭೂಪಾಲ, ಕೃಷ್ಣದೇವರಾಯ ಇವರಿಗೆ ವ್ಯಾಸತೀರ್ಥರು ಸುದೀರ್ಘ ಕಾಲ ಸಾಮ್ರಾಜ್ಯ ಗುರುಗಳಾಗಿ ಕೃಪೆ ಮಾಡಿದ್ದಾರೆ. ಶ್ರೀಗಳ ಅಗಾಧವಾದ ಸಾಧನೆಯ ಫಲವನ್ನು ನಾವು ಇಂದಿಗೂ ನಿರೂಪಿಸುತ್ತಿದ್ದೇವೆ. ಅಂದಮೇಲೆ ಅವರ ಸಾಧನೆಯ ಪೂರ್ಣ ಕಲ್ಪನೆಯ ಇತಿಹಾಸ ಸಂಘಟಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯ ವ್ಯಾಸ ಪ್ರತಿಷ್ಠಿತ ಪ್ರಾಣದೇವರುಗಳ ತಾಣಗಳನ್ನು ಶೋಧಿಸುವುದು, ಶ್ರೀ ವ್ಯಾಸತೀರ್ಥರನೇಕ ಸಾಧನೆ ಶೋಧನೆಗಳಲ್ಲಿ ಇದು ಒಂದು ಭಾಗ ಮಾತ್ರ. ಅದಾಗ್ಯೂ ಈ ಕಾರ್ಯ ಸಣ್ಣದೇನಲ್ಲ; ಬಹಳಷ್ಟು ಜನರಿಂದ ಬಂದ ಸಾಮಾನ್ಯ ಆತಂಕವೇನೆಂದರೆ, "ಶ್ರೀ ವ್ಯಾಸ ತೀರ್ಥರು ಉತ್ತರ ಭಾರತ ಕಳಿಂಗ ದೇಶ, ಆಂಧ್ರ, ತಮಿಳುನಾಡುವರೆಗೆ ಸಂಚರಿಸಿದಾಗ, ವ್ಯಾಸ ಪ್ರತಿಷ್ಠಿತ ಪ್ರಾಣದೇವರ ತಾಣಗಳು ಹುಡುಕುವುದು ಸಾಧ್ಯವಾಗದ ಮಾತು." ಆದರೆ ಶ್ರೀ ವ್ಯಾಸತೀರ್ಥರ ಜೀವನ ಚರಿತ್ರೆಯನ್ನು ಬೇಲೂರು ಕೇಶವ ದಾಸರ ಸಂಕಲನ ಗ್ರಂಥವಾದ "ಶ್ರೀ ಕರ್ಣಾಟಕ ಭಕ್ತ ವಿಜಯ" ಓದಿದಾಗ ಈ ಅನುಮಾನಕ್ಕೆ ಪೂರ್ಣ ವಿರಾಮ ದೊರೆಯುತ್ತದೆ. ಶ್ರೀ ವ್ಯಾಸತೀರ್ಥರು ಶಾ.ಶ. ೧೪೩೨ ರುಧಿರೋದ್ಗಾರಿ ನಾಮ ಸಂವತ್ಸರ (ಕ್ರಿ.ಶ. ೧೫೦೦) ದಲ್ಲಿ ಹಂಪಿಯ ಚಕ್ರತೀರ್ಥದಲ್ಲಿ ಯಂತ್ರೋದ್ಧಾರಕ ಪ್ರಾಣದೇವರ ಪ್ರತಿಷ್ಠಾಪನೆಯೊಂದಿಗೆ ಪ್ರತಿಷ್ಠಾಪನಾ ಕಾರ್ಯಕ್ರಮ ಮುಂದುವರೆಸಿದರೆಂದಮೇಲೆ, ಇದಕ್ಕಿಂತ ಮೊದಲು ದ್ವೈತ ಮತ ಪ್ರತಿಪಾದನೆ ಮತ್ತು ಸಿದ್ಧಾಂತ ದಿಗ್ವಿಜಯಕ್ಕಾಗಿ ಅಖಿಲ ಭಾರತ ಪ್ರವಾಸಗೈದರೂ, ಪ್ರಾಣದೇವರ ಪ್ರತಿಷ್ಠಾಪನೆ ಈ ದೂರದ ಪ್ರದೇಶಗಳಲ್ಲಿ ಗೈದಿಲ್ಲವೆಂದು ನಿರ್ಧರಿಸಬಹುದು. ಕ್ರಿ.ಶ. ೧೫೦೦ ನಂತರ ಎಷ್ಟು ಕಾಲದವರೆಗೆ ಪ್ರತಿಷ್ಠಾಪನಾಕಾರ್ಯ ಮುಂದುವರೆಸಿದರೂ ಎಂಬ ವಿಷಯ ಸವಿಸ್ತಾರವಾಗಿ ವಿಶ್ಲೇಷಿಸೋಣ.

ಕೃಷ್ಣದೇವರಾಯನಿಗೆ ಪ್ರತಿನಿತ್ಯವೂ ಗುರುಗಳ ದರ್ಶನವಾದರೇ ಎಲ್ಲಿಲ್ಲದ ಸಂತೃಪ್ತಿ. ಆಕಸ್ಮಾತಾಗಿ ವ್ಯಾಸತೀರ್ಥರು ಪೆನುಗೊಂಡೆಗೆ ಹೋಗಿದ್ದರೂ, ೨--೩ ದಿನಗಳಲ್ಲಿ ಕರೆಯಿಸಿಕೊಳ್ಳುವ ಪದ್ಧತಿ. ವ್ಯಾಸ ತೀರ್ಥರಿಗೆ, ಕೃಷ್ಣದೇವರಾಯನ ಮರಣವಾರ್ತೆಯಿಂದ ಎಷ್ಟು ಆಘಾತವಾಯ್ತೆಂದರೆ, ಅವರು ಜೀವನದ ಎಲ್ಲ ರಂಗಗಳಿಗೂ ವಿರಕ್ತಿ ಮಾಡಿಸಿಕೊಂಡಿರು. ಅಂದರೆ ಕೃಷ್ಣದೇವರಾಯನು ಕ್ರಿ.ಶ. ೧೫೦೯ ರಲ್ಲಿ ಪಟ್ಟಕ್ಕೆ ಬರುವ ಮುಂಚೆಯೇ ವ್ಯಾಸತೀರ್ಥರ ಪ್ರಾಣದೇವರ ಪ್ರತಿಷ್ಠಾಪನ ಕಾರ್ಯಕ್ರಮ ಮುಕ್ತಾಯವಾಗಿತ್ತೆಂದು ಗ್ರಹಿಸಬಹುದು.



ವ್ಯಾಸತೀರ್ಥರು ಒಂದು ಲಕ್ಷ ಪ್ರಾಣದೇವರ ಪ್ರತಿಷ್ಠಾಪನೆ ಮಾಡಿದರೆಂದು ಬಹುಕಾಲದಿಂದ ನಂಬಿಕೆಯಿದೆ. ಮತ್ತೊಂದು ಕಡೆ ಮೆಹಬೂಬನಗರ ಜಿಲ್ಲೆಯ ದಿ: ಕೊತ್ತಕೋಟ ಪಾಳ್ಯಂ ಪದ್ಮನಾಭಾಚಾರ್ಯರು ತಿಳಿಸಿದ ಪ್ರಕಾರ ಶ್ರೀ ವ್ಯಾಸತೀರ್ಥರು ೭೭೭೭ ಉಬ್ಬು ಶಿಲ್ಪದ ಪ್ರಾಣದೇವರು ಮತ್ತು ೭೭೭ ರೇಖಾ ಚಿತ್ರದ ಪ್ರಾಣದೇವರು ಪ್ರತಿಷ್ಠಾಪಿಸಿದರೆಂದು ಮತ್ತು ಈ ಸಂಖ್ಯೆಗಳಿಗೆ ಆಧ್ಯಾತ್ಮಿಕ ವಿವರಣೆ ದಿ: ಪದ್ಮನಾಭಾಚಾರ್ಯರು ಕೊಡುತ್ತಿದ್ದರೆಂದು ರಾಯಚೂರಿನ ಶ್ರೀನಿವಾಸಾಚಾರ್ಯ ಗ್ರಾಮಲೆಕ್ಕಿಗರು ತಿಳಿಸಿದ್ದಾರೆ. ರೇಖಾಚಿತ್ರದ ವ್ಯಾ. ಪ್ರ. ಪ್ರಾಣದೇವರುಗಳನ್ನು ಅಲ್ಲಲ್ಲಿ ಕಾಣಬಹುದು. ಆದರೆ ಸ್ವಾಮಿ ವಿದ್ಯಾರತ್ನಾಕರರ ಗ್ರಂಥದಲ್ಲಿ ಉಲ್ಲೇಖನ ಪ್ರಕಾರ ಶ್ಲೋಕ ಈ ರೀತಿ ಇದೆ.

ದ್ವಾತ್ರಿಂ ಶತ್ಸಪ್ತ ಶತಕೇ
ಮೂರ್ತೀಹನುಮತ ಪ್ರಭೋ;
ಪ್ರತಿಷ್ಠಾತ್ ........................
ವ್ಯಾಸರಾಜ ಸ್ತೋತ್ರ ವಿಜಯೀಂದ್ರ

ಈ ಪ್ರಕಾರ ಕ್ರಿ.ಶ. ೧೫೦೦ ರಲ್ಲಿ ಶ್ರೀ ವ್ಯಾಸತೀರ್ಥರು ೭೩೨ ಪ್ರಾಣದೇವರ ಪ್ರತಿಷ್ಠಾಪನೆ ಮಾಡಿದರೆಂದು ಲಿಖಿತ ಆಧಾರ ದೊರೆಯುತ್ತದೆ. ಆದಕಾರಣ ಶ್ರೀ ವ್ಯಾಸತೀರ್ಥರು ೭೩೨ ತಾಣಗಳಲ್ಲಿ ಪ್ರಾಣ ಪ್ರತಿಷ್ಠಾಪನೆ ಗೈದರೆಂದೇ ಗ್ರಹಿಸಬೇಕು. ಆದಕಾರಣ ಎಲ್ಲ ಪ್ರಮುಖ ವೈಷ್ಣವ ಕೇಂದ್ರಗಳಲ್ಲಿ ವ್ಯಾಸ ಪ್ರತಿಷ್ಠಿತ ಪ್ರಾಣದೇವರು ನೋಡಲು ಸಿಗುತ್ತವೆ.

ವಿಜಯನಗರ ಸಾಮ್ರಾಜ್ಯ ಕಾಲದಲ್ಲೂ, ತದನಂತರದಲ್ಲೂ ಈವರೆಗೆ ನಮ್ಮ ನೆರೆಹೊರೆ ಜಿಲ್ಲೆಗಳಲ್ಲಿ ಲಕ್ಷಗಟ್ಟಲೆ ಪ್ರಾಣದೇವರ ಸ್ಥಾಪನೆಯಾದದ್ದು ನಾವು ನೋಡಬಹುದು. ಊರು ಸುಟ್ಟರೆ ಹನುಮಪ್ಪ ಹೊರಗೆ, ಹನುಮಪ್ಪಗೆ ಪೂಜೆ ನಿಂತರೆ ಊರು ಹಾಳಾಗುವುದು, ಹನುಮಪ್ಪ ಇಲ್ಲದ ಊರಿಲ್ಲ ಎಂಬ ಸಾಮಾನ್ಯ ಗಾದೆಗಳು ನಮಗೆ ಕೇಳಿಬರುತ್ತವೆ. ಆದಕಾರಣ ರಾಶಿರಾಶಿಯಾಗಿದ್ದ ಈ ಹನುಮಪ್ಪನ ಗುಡಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ಶುಲ್ಕಸಹಿತ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

ಪೇಷ್ಕಾರ್.

ಗಳ ಮಧ್ಯೆ ವ್ಯಾಸಪ್ರತಿಷ್ಠಿತ ಹನುಮಪ್ಪನನ್ನು ಗುರುತಿಸುವುದು ಹೇಗೆ?

ವ್ಯಾಸ ಪ್ರತಿಷ್ಠಿತ ಪ್ರಾಣದೇವರು ಎಲ್ಲಿಯೂ ಅಂಜಲೀ ಹಸ್ತನಾಗಿ ಅಭಂಗಸ್ಥಿತಿ (ಕೈಮುಗಿದು ನಿಂತ) ಯಲ್ಲಿಲ್ಲ, ಇವೆಲ್ಲ ಸಾಧಾರಣವಾಗಿ ಹೊಯ್ಸಳರ ಕಾಲದವು. ಶ್ರೀ ವಾದಿರಾಜರು ಬಿಜಾಪುರ ಜಿಲ್ಲೆಯಲ್ಲಿ ಕೆಲವು ಜಾಗೃತ ಪ್ರಾಣದೇವರ ಸ್ಥಾಪನೆ ಮಾಡಿದ್ದಾರೆ. ಯಲಗುರೇಶ, ತುಳಸೀಗಿರೀಶ, ಕೋರುವಾರೀಶ, ಹಲಗಣೇಶ, ಅಚನೂರೇಶ ಎಂದು ಹೆಸರುಗಳುಂಟು. ಶ್ರೀ ವಿಜಯದಾಸರು ಆದೋನಿಯಲ್ಲಿ ಪ್ರಸನ್ನಾಂಜನೇಯನನ್ನು ಸ್ಥಾಪಿಸಿದರೆ, ರಾಘವೇಂದ್ರ ಸ್ವಾಮಿಗಳೂ, ಕುಂಭಕೋಣಂ ಮಿಯಿಂದ್ರ ಸ್ವಾಮಿಗಳು ಆಂಜನೇಯ ಸ್ಥಾಪನೆ ಮಾಡಿದ್ದಾರೆ.

ಮುಳಬಾಗಿಲಿನಲ್ಲಿ ಅರ್ಜುನ ಸ್ಥಾಪಿತ ಆಂಜನೇಯನಿದ್ದರೆ, ಮೆಹಬೂಬನಗರ ಜಿಲ್ಲೆಯ ಮೊಕ್ತಲೆನಲ್ಲಿ ಜಾಂಬುವಂತ ಪ್ರತಿಷ್ಠಿತ ಪ್ರಾಣದೇವರಿದ್ದಾನೆ. ಕಡಪ ಜಿಲ್ಲೆಯ ಗಂಡಿಗ್ರಾಮದಲ್ಲಿ ಸ್ವಯಂ ರಾಮನೇ ಕೆತ್ತಿದನೆಂದು ಹೇಳುವ ರಾಮಹಸ್ತ ಆಂಜನೇಯನಿದ್ದಾನೆ. ರಾಯಚೂರು ತಾಲೂಕೀನ ಆತ್ಕೂರು ಗ್ರಾಮದಲ್ಲಿ ಸಂಜೀವಿನಿ ಸಸ್ಯಹಿಡಿದ ಸಂಜೀವರಾಯನಿದ್ದಾನೆ. ಕಾವೇರಿ ನದಿಯಲ್ಲಿ ಮುಳುಗಿದ ಸೀತಾಮಾತೆಯ ಮುತ್ತನ್ನು ಬಾಲದಿಂದ ಹುಡುಕಿತೆಗೆದ ಮುತ್ತತ್ತಿರಾಯನಿದ್ದಾನೆ. ರಾಮಾಯಣದ ಹಲವಾರು ಸಂದರ್ಭ ಸೂಚಿಸುವ ಆಂಜನೇಯ ಅಲ್ಲಲ್ಲಿ ಸಿಗುತ್ತಾನೆ. ಸಂಗೀತಾಚಾರ್ಯ ಆಂಜನೇಯ, ಸರ್ವವಿದ್ಯಾಧರ ಆಂಜನೇಯ, ವಿಶ್ವಕರ್ಮ ಆಂಜನೇಯ, ಪಂಚಮುಖಿ ಆಂಜನೇಯ, ಭೀಮಾವತಾರ ಆಂಜನೇಯ ಸಿಗುವುದಲ್ಲದೆ ಪ್ರತಿಯೊಬ್ಬರ ಮನೆಯ ತುಳಸೀಕಟ್ಟೆ ಆಂಜನೇಯ ವ್ಯಾಸರಾಯರ ಸ್ಮರಣಾರ್ಥವಾಗಿ ದೊರೆಯುತ್ತಾನೆ. ವ್ಯಾಸತೀರ್ಥರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರಾಣದೇವರ ಪ್ರತಿಷ್ಠೆ ಮಾಡಿದ್ದರಿಂದ, ಮುಂದೆ ಅವರ ಶಿಷ್ಯಂದಿರೂ, ಭಕ್ತಾದಿಗಳು ವ್ಯಾಸರಾಯರ ಸ್ಮರಣಾರ್ಥವಾಗಿ ಬಾಲಾಂಜನೇಯ (ಬಾಲಕ ರೂಪ) ಸ್ಥಾಪನೆ ಮಾಡುವ ಪದ್ಧತಿ ಹಾಕಿಕೊಂಡರು. ಹೀಗಾಗಿ ವ್ಯಾಸರಾಯರು ಸಂಚರಿಸಿದ ಸ್ಥಳಗಳಲ್ಲಿ ಮುಂದೆ ಭಕ್ತಾದಿಗಳು ಬಾಲಾಂಜನೇಯನ ಸಾವಿರಗಟ್ಟಲೆ ವಿಗ್ರಹಸ್ಥಾಪನೆ ಗೈದರು, ಕೃಷ್ಣದೇವರಾಯನ ಆಸ್ಥಾನ ಜಗಜೆಟ್ಟಿ ಸಮರ್ಥ ರಾಮದಾಸಸ್ವಾಮಿ ಆಂಜನೇಯ ಭಕ್ತ. ಇವನು ೧೨೦೦ ಗರಡಿಮನೆಗಳು ಸ್ಥಾಪಿಸಿದನು. ಈ ಗರಡೀ ಮನೆಯ ಆರಾಧ್ಯದೇವರು ಗರಡೀ ಆಂಜನೇಯ. ಹೀಗಾಗಿ ೧೨೦೦ ಗರಡಿ ಆಂಜನೇಯ ಸ್ವಾಮಿ ಗುಡಿ

ಗಳೂ ಹರಡಿಕೊಂಡಿವೆ. ಕಾಲಗತಿಯಲ್ಲಿ, ಹೊಸ ಊರು ಸ್ಥಾಪನೆಯಲ್ಲಿ ಆಚಾರ್ಯ ವರ್ಗದವರು ಆಂಜನೇಯ ಸ್ಥಾಪನೆ ಮಾಡಿದ್ದಾರೆ.

ಆದ್ದರಿಂದ ಐತಿಹಾಸಿಕ ಹಿನ್ನೆಲೆಯ, ಆಧಾರದ ಮೇಲೆ ಮತ್ತು ಆಂಜನೇಯ ಮೂರ್ತಿಯ ವಿರಾಟ ಸ್ವರೂಪದ ಮೇಲೆ (ಅಲಂಕಾರವಿಲ್ಲದ ಸಹಜ ರೂಪ) ವ್ಯಾಸ ಪ್ರತಿಷ್ಠಿತ ಪ್ರಾಣದೇವರುಗಳನ್ನು ವಿಂಗಡಣೆ ಮಾಡಬೇಕು.

ಇಲ್ಲಿ ವಿಷಯ ಮುಂದುವರೆಸುವ ಮುನ್ನ ಮುಳುಬಾಗಿಲುನಲ್ಲಿದ್ದ ವ್ಯಾಸತೀರ್ಥರು ಹಂಪಿಗೆ ಬಂದರು ಎಂಬ ವಿಷಯ ಸ್ವಲ್ಪ ತಿಳಿಸಬೇಕಾಗುತ್ತದೆ. ವಿಷಯ ಮುಂದುವರೆಸುವುದಕ್ಕೆ ಈ ವಿವರಣೆ ಐತಿಹಾಸಿಕ ಹಿನ್ನೆಲೆಯಾಗುವುದು.

ಕ್ರಿ. ಶ. ೧೪೯೬ ರಲ್ಲಿ ಸಾಳ್ವವಂಶದ ತಿಮ್ಮರಾಯನು ಮುಳಬಾಗಿಲಿಗೆ ಹೋಗಿ, ಶ್ರೀಪಾದರಾಜರನ್ನು ಸಾಮ್ರಾಜ್ಯ ಗುರುಗಳಾಗಲು ವಿನಂತಿಸುತ್ತಾನೆ. ಈ ವೇಳೆಗಾಗಲೇ ಶ್ರೀ ಪಾದರಾಜರಿಗೆ ೯೨ ವರ್ಷಗಳಾಗಿದ್ದವು. ರಾಜಕೀಯ ವಿಷಯದಲ್ಲಿ ವೈರಾಗ್ಯ ಮೂಡಿತ್ತು. ಆದಕಾರಣ ವ್ಯಾಸತೀರ್ಥರನ್ನು ಗುರುಗಳಾಗಿ ಸ್ವೀಕರಿಸಲು ಸೂಚಿಸುವರು, ವ್ಯಾಸತೀರ್ಥರು ವಿಜಯನಗರ ಸಾಮ್ರಾಜ್ಯ ಗುರುವರ್ಯರಾಗಿ ಪ್ರಥಮವಾಗಿ ಹಂಪಿಗೆ ಬರುವರು, ಇಲ್ಲಿಂದಲೇ ಅವರಿಗೆ ರಾಜಕೀಯ ಸಂಪರ್ಕ, ಅಂದರೆ ಹಂಪಿಗೆ ಬರುವ ಮುನ್ನವೇ ಅಖಿಲಭಾರತ ಪ್ರವಾಸ ಮಾಡಿ ಮಾಧ್ವಸಿದ್ಧಾಂತ ದಿಗ್ವಿಜಯಗೈದು ತಮ್ಮ ಗುರುಗಳನ್ನು ಕೂಡಿಕೊಂಡಿದ್ದರು. ಮತ್ತೊಮ್ಮೆ ಅವರು ಅಖಿಲಭಾರತ ಪ್ರವಾಸ ಮಾಡಲಿಲ್ಲ, ಕ್ರಿ.ಶ. ೧೪೯೬ ರಿಂದ ೧೫೪೮ ರವರೆಗೆ, ವ್ಯಾಸತೀರ್ಥರು ಸುತ್ತಲಿನ ಸಾಮ್ರಾಜ್ಯಗಳೊಂದಿಗೆ ಸ್ನೇಹ ಸೌಹಾರ್ದ, ಶಾಂತಿ, ಸುರಕ್ಷತೆ ಕಲ್ಪಿಸುವಲ್ಲಿ ನಿರತರಾಗಿ ಯಶಸ್ವಿಯಾದರು. ಇದಾದನಂತರ ಅವರು ಹೆಚ್ಚುಕಾಲ, ಚಕ್ರತೀರ್ಥದ ಮಠದಲ್ಲಿ ಇರುತ್ತಿದ್ದರು. ಆದಕಾರಣ ವ್ಯಾಸತೀರ್ಥರು ಕ್ರಿ.ಶ. ೧೫೪೮ ರನಂತರ ಉತ್ತರಭಾರತ ತಮಿಳುನಾಡು ಪ್ರವಾಸಗೈಯಲಿಲ್ಲವೆಂದು ಮತ್ತೊಮ್ಮೆ ಒತ್ತಿ ಹೇಳಬೇಕಾಗುತ್ತದೆ.

ಹೀಗಿರುವಾಗ ಕ್ರಿ.ಶ. ೧೫೦೦ ರಲ್ಲಿ ವ್ಯಾಸರಾಯರಿಗೆ ಒಂದು ವಿಚಿತ್ರ ಅನುಭವವಾಯ್ತು. ಪದ್ಧತಿಯಂತೆ ಪ್ರತಿ ಪ್ರಾತಃಕಾಲ ಜಪಕ್ಕೆ ಕೂಡುವಂತೆ ಆ ದಿನವೂ ವ್ಯಾಸತೀರ್ಥರು ಈಗಿರುವ ಯಂತ್ರೋದ್ಧಾರಕ ಪ್ರಾಣದೇವರ ಸ್ಥಳದಲ್ಲಿ (ಚಕ್ರತೀರ್ಥದಲ್ಲಿ) ಜಪಮಾಡುತ್ತಿರುವಾಗ ಆಂಜನೇಯದರ್ಶನವಾಗಿ ಜಪವು ಭಂಗವಾಗಹತ್ತಿತು. ಈ ಸಂದರ್ಭ ಕಾರಣ ತಿಳಿಯಲು ಅಂದು ರಾತ್ರಿ ಶ್ರೀಗಳು ಆಂಜನೇಯ ಸ್ತೋತ್ರ ಮಾಡಿ ಪವಡಿಸಿದರು. ಅಂದು ರಾತ್ರಿ ಸ್ವಪ್ನದಲ್ಲಿ ಆಚಾರ್ಯರೂಪದಿಂದ (ಮಧ್ವಾಚಾರ್ಯರು) ದರ್ಶನವಿತ್ತು "ಸ್ತೋತ್ರಮಾಡಿದರೆ ಮಾತ್ರ ಸಾಲದು ನನ್ನ ಮೂರ್ತಿ ಪ್ರತಿಷ್ಠಾಪನೆ ಮಾಡೆಂದು" ಹೇಳಿದಂತಾಯ್ತು. ಅಂದಿನಿಂದ ವ್ಯಾಸತೀರ್ಥರು ಆಂಜನೇಯನ್ನು ತಮ್ಮ ಆರಾಧ್ಯದೇವರಾಗಿ ಸ್ವೀಕರಿಸಿಕೊಂಡು ಮುಖ್ಯ ಪ್ರಾಣನ ಪ್ರತಿಷ್ಠಾಪನಾ ಕಾರ್ಯ ಮುಂದುವರೆಸಿದರು. ಇಲ್ಲಿಗೆ ಶ್ರೀ ವ್ಯಾಸತೀರ್ಥರಿಗೆ ೫೩ ವರ್ಷಗಳಾಗಿದ್ದವು.

ಚಕ್ರತೀರ್ಥದಲ್ಲಿ ಸ್ವಪ್ನವಾದ ಮರುದಿನ ಪ್ರಾತಃಕಾಲದಲ್ಲಿ ವ್ಯಾಸತೀರ್ಥರು ಅಂಗಾಂಗದಿಂದ ಆಂಜನೇಯ ಮೂರ್ತಿ ಬರೆದಾಗ ಮಂಗನಾಗಿ ಹಾರಿ ಹೋಗಹತ್ತಿತು. ಎಷ್ಟುಸಲ ಬರೆದರೂ, ಆಂಜನೇಯ ನಿಲ್ಲದೆ ಹಾರಿ ಹೋಗ ಹತ್ತಿದ್ದ. ಕಡೆಗೆ ವ್ಯಾಸತೀರ್ಥರು ಅಂಗಾರದಿಂದ ಆಂಜನೇಯನನ್ನು ಬರೆಯುತ್ತ ಯಂತ್ರದಿಂದ ದಿಗ್ಬಂಧನ ಮಾಡಿದರು. ಆಗ ಅಂಗಾರದಲ್ಲಿ ಆಂಜನೇಯ ಒಡಮೂಡಹತ್ತಿದನು. ಈತನೇ ಯಂತ್ರೋದ್ಧಾರಕ ಪ್ರಾಣದೇವರು. ಈ ಯಂತ್ರೋದ್ಧಾರಕ ಪ್ರಾಣದೇವರಿಗೆ ಸಾಳ್ವವಂಶದ ತಿಮ್ಮರಾಯ ಗುಡಿಯನ್ನು ನಿರ್ಮಿಸಿದನು.

ವ್ಯಾಸತೀರ್ಥರು ಪ್ರತಿಷ್ಠಾಪನೆ ಮಾಡಿದ ಪ್ರಾಣದೇವರ ಲಕ್ಷಣ ವಿವರಣೆ ಈ ರೀತಿ ಇದೆ.

ಆಂಜನೇಯನು ವೀರಾವೇಶದಿಂದ ಸಾಗರದಾಟಲು ಜಿಗಿಯುವ ಭಂಗಿಯಲ್ಲಿದ್ದಾನೆ. ಕಾಲುಗಳ ಮಧ್ಯದಲ್ಲಿ ರಾವಣಾಸುರನ ಮಗ ಅಕ್ಷಯಕುಮಾರ ಸಂಹಾರವಾದ ಚಿತ್ರ. ಅಶೋಕವಾಟಿಯಲ್ಲಿ ಬಂಧಿತಳಾದ ಸೀತಾ ಮಾತೆ ಸಂದೇಶ ಮುಟ್ಟಿಸುವ ತರಾತುರಿಯಲ್ಲಿ ಊರ್ಧ್ವಮುಖಿಯಾಗಿದ್ದಾನೆ. ಆಂಜನೇಯ ಜೀವಿತದಲ್ಲಿ ಇದು ಅತ್ಯಂತ ಶ್ರೇಷ್ಠ ಸೇವಾ ಘಳಿಗೆಯೆಂದು ವ್ಯಾಸತೀರ್ಥರು ಗ್ರಹಿಸಿ, ಈ ಭಂಗಿಯನ್ನು ಅರಿಸಿಕೊಂಡಿರಬೇಕು. ಇದು ಭಕ್ತಾದಿಗಳಲ್ಲಿ ಆತ್ಮವಿಶ್ವಾಸ ಹುಟ್ಟಿಸುವ ದ್ಯೋತಕವೂ ಆಗುವುದು. ಇದೂ ಅಲ್ಲದೆ ವ್ಯಾಸ ಪ್ರತಿಷ್ಠಿತ ಪ್ರಾಣದೇವರಿಗೆ ಈ ಕೆಳಕಂಡ ಲಕ್ಷಣಗಳಿರುತ್ತವೆ.

೧. ಆಂಜನೇಯನ ಬಾಲಕ್ಕೆ ಗಂಟೆ ಇರುತ್ತದೆ.

೨. ಸೊಂಟದ ಮೇಲೆ ಸೌಗಂಧಿಕಾ ಪುಷ್ಪ ಸಹಿತವಾದ ಎಡಗೈ ಇರುತ್ತದೆ.

೩. ಬಾಲದ ಹೊರಕ್ಕೆ ಚಾಚಿ ಎತ್ತಿರುವ ಬಲ ಅಭಯ ಹಸ್ತವಿರುತ್ತದೆ.

೪. ಶಿರಸ್ಸಿನ ಮೇಲೆ ರಾಮನಾಮ ಕೆತ್ತಿರುತ್ತಾರೆ.

೫. ಪ್ರಭಾವಳಿಯಲ್ಲಿ ದಶಾವತಾರ ಮೂಡಿಸಿರುತ್ತಾರೆ.

೬. ಪಾದುಕೆಗಳು ಮೆಟ್ಟಿದ ಪಾದ ಕಾಣುತ್ತವೆ.

೭. ನವರತ್ನ ಮಾಲೆಯಿಂದ ಅಲಂಕೃತವಾಗಿರುತ್ತಾನೆ.

೮. ಶಂಖ, ಚಕ್ರಗಳಿರುತ್ತವೆ (ಮೇಲ್ಭಾಗ ಎಡ, ಬಲಕ್ಕೆ)

೯. ಚಂಡಿಕೆ ಮುಡಿ ಗಟ್ಟಿರುತ್ತಾನೆ.

ಸಾಗರೋಲ್ಲಂಘನೆಗಾಗಿ ಬಾಲದ ಹೊರಗೆ ಚಾಚಿದ ಅಭಯ ಹಸ್ತ ಭಂಗಿಯ ಆಂಜನೇಯ ವಿಜಯನಗರದರಸರಿಗೆ ಬಹಳ ಪ್ರಿಯಕರವಾಗಿತ್ತು. ಅಂತೆಯೇ ಹಂಪಿಯಲ್ಲಿ ಕಡ್ಲೆಕಾಳು ಗಣಪನ ಮುಂದಿರುವ ಮಂಟಪದ ಕಂಬಗಳಲ್ಲಿ ಮತ್ತು ವಿಜಯ ವಿಠಲರಾಯನ ಗುಡಿಯಲ್ಲಿ ಮಂಟಪದ ಕಂಬಗಳಲ್ಲಿ ಅಲಂಕಾರಕ್ಕಾಗಿ ಉಬ್ಬು ಶಿಲ್ಪಗಳು ಬಿಡಿಸಿದ್ದಾರೆ. ರಾಯಚೂರಲ್ಲಿ ಎರಡನೇ ಸುತ್ತಿನ ಕೋಟೆಯ ಉತ್ತರದ ಬಾಗಿಲಾದ ನವರಂಗ ದರ್ವಾಜದಲ್ಲಿ ಸಹಿತ ದ್ವಾರದ ಹಣೆಪಟ್ಟಿಯ ಮಧ್ಯ ಭಾಗದಲ್ಲಿ ಈ ಅಭಯ ಹಸ್ತ ಆಂಜನೇಯ ನಿದ್ದಾನೆ. ಇದು ವ್ಯಾಸರಾಯರ ಸ್ಮರಣಾರ್ಥ ಮತ್ತು ಗುರುಗಳಿಗೆ ವಿಧೇಯತೆಯ ದ್ಯೋತಕವೆಂದುಕೊಳ್ಳಬಹುದು. ದರವಾಜದ ಒಳಗಡೆಯೂ ೨--೩ ಆಂಜನೇಯರಿದ್ದಾರೆ. (ಅಲಂಕಾರವಾಗಿ) ದರವಾಜದಮೇಲೆ ತಿರುಪತಿ ವೆಂಕಟರಮಣನ ಶಂಖ, ಚಕ್ರ, ನಾಮಗಳೂ ಇವೆ. ವ್ಯಾಸ ಪ್ರತಿಷ್ಠಿತ ಪ್ರಾಣದೇವರುಗಳಲ್ಲಿ ಇನ್ನೂ ಕೆಲವೂ ಸ್ವತಂತ್ರ ಲಕ್ಷಣದವೂ ಇವೆ. ಯಂತ್ರೋದ್ಧಾರಕ ಪ್ರಾಣದೇವರು, ಕಮಲಪೀಠದಲ್ಲಿ ಪದ್ಮಾಸನದಲ್ಲಿ ಕುಳಿತು ಧ್ಯಾನ ಮುದ್ರೆಯಲ್ಲಿದ್ದಾನೆ. ಯಂತ್ರದಿಂದ ದಿಗ್ಬಂದನಗೊಂಡಿದ್ದಾನೆ. ನವವೃಂದಾವನದಲ್ಲಿ ಆಂಜನೇಯನು ಧರ್ಮ ಗ್ರಂಥ ಹಿಡಿದು ಕುಳಿತಿದ್ದಾನೆ (ಶ್ರೀಮದಾನಂದ ತೀರ್ಥರ ಅವತಾರ). ಹರಪನಹಳ್ಳಿಯಲ್ಲಿ ಮೊದಲು ಮತ್ತೆ ವ್ಯಾಸತೀರ್ಥರಿಂದ ಮರುಪ್ರತಿಷ್ಠೆಯಾದದ್ದು. ಕ್ರಿ.ಶ. ೧೫೦೦ ಕ್ಕಿಂತ ಪೂರ್ವದಲ್ಲಿಯೇ ಅಂದರೆ ೧೪೯೬--೯೭ ರಲ್ಲಿ ವ್ಯಾಸತೀರ್ಥರು ತಮಿಳುನಾಡಿನ ಶ್ರೀರಂಗಂನಲ್ಲಿ ಮಾರುತಿ ಪ್ರತಿಷ್ಠಾಪನೆ ಮಾಡಿದ್ದಾರೆ. ಹಿಂದೆ ನೃಸಿಂಹ ಭೂಪಾಲನು ಮತ್ತು ವ್ಯಾಸರಾಯರು ಶ್ರೀರಂಗಕ್ಕೆ ಹೋದಾಗ ಅಲ್ಲಿ ಶ್ರೀರಂಗನ ದೇವಸ್ಥಾನದವರಿಗೂ, ಜಂಬುಕೇಶ್ವರ ದೇವಸ್ಥಾನದವರಿಗೂ, ಅಂಗಳದ ಸರಿಹದ್ದು ಸಮಸ್ಯೆ ಬಗೆಹರಿಸಬೇಕಾಗಿ ಬಂದಿತು. ಆಗ ವ್ಯಾಸರಾಯರು ನ್ಯಾಯ ಸಮ್ಮತವಾಗಿ ಸಮಸ್ಯೆ ಬಗೆಹರಿಸಿ ರಂಗ ಧ್ವಜದ ಬಳಿ ಮಾರುತಿ ಪ್ರತಿಷ್ಠಾಪನೆ ಮಾಡಿದರು. ಇಂದಿಗೂ ಈತನಿಗೆ ಆರಾಧನೆ ನಡೆದಿದೆ, ಈ ಸಂದರ್ಭ ವ್ಯಾಸರಾಯರ ಪರಧರ್ಮ ಸಹಿಷ್ಣುತೆ ಸೂಚಿಸುತ್ತದೆ.

ವ್ಯಾಸ ಪ್ರತಿಷ್ಠಿತ ಪ್ರಾಣದೇವರುಗಳಲ್ಲಿ ಮೇಲ್ಕಾಣಿಸಿದ ಒಂಬತ್ತೂ ಲಕ್ಷಣಗಳು ಎಲ್ಲ ಕಡೆ ಸಿಗುವುದಿಲ್ಲ. ಬಹಳಷ್ಟು ಕಡೆ ೪--೫ ಲಕ್ಷಣಗಳು ಮಾತ್ರ ದೊರೆಯುತ್ತವೆ. ಶಂಖ, ಚಕ್ರ, ಬಲಗೈ ಅಭಯ ಹಸ್ತ ಬಾಲದ ಹೊರಗೆ, ರಾಮನಾಮ, ಚಂಡಿಕೆ ಮುಡಿ ಹಾಕಿದ್ದು ಇವುಗಳಲ್ಲಿ ಯಾವುದಾದರೂ ಹೆಚ್ಚು ಕಡಿಮೆಯಾಗಿರುತ್ತದೆ. ಸೌಗಂದಿಕಾಪುಷ್ಪ ಎಲ್ಲಾ ಕಡೆ ನೋಡಲು ಸಿಕ್ಕರೆ, ಕೆಲವು ಕಡೆ ಒಳ್ಳೆಯ ಎರಡು ತುದಿಗೆ ಪುಷ್ಪವಿರುತ್ತವೆ. ನವರತ್ನ ಮಾಲೆ ಸರ್ವೇ ಸಾಧಾರಣವಾಗಿ ನೋಡಬಹುದು. ದಶಾವತಾರ ಪ್ರಭಾವಳಿ, ಕಾಲಲ್ಲಿ ಪಾದುಕೆಗಳು ಬಹಳ ವಿರಳ. ಬಾಲಕ್ಕೆ ಗಂಟೆ ಇದ್ದ ಮೂರ್ತಿಗಳೂ ಬಹಳ ವಿರಳ.

ಇದೂ ಅಲ್ಲದೆ ಇನ್ನೂ ಕೆಲವು ಸಾಮಾನ್ಯ ಲಕ್ಷಣ ಇರುತ್ತವೆ. ಒಂದೊಂದು ಕಡೆ ಎರಡು ಕಣ್ಣು ಬಿಡಿಸಿರುತ್ತಾರೆ, ಕಿರೀಟ ವಿರಬಹುದು ಅಥವಾ ಮಣಿಹಾರ ತಲೆಗೆ ಅಲಂಕರಿಸಬಹುದು. ಕರ್ಣಕುಂಡಲ ಸಣ್ಣವು ಅಥವಾ ನೀಳವಾದವು, ಕೋರೇ ಹಲ್ಲು, ಮೀಸೆಗಳು ಇರಬಹುದು. ಕಾಲುಗಳ ಮಧ್ಯೆ ಅಕ್ಷಯಕುಮಾರ ಕೆತ್ತನೆ ಸರಿ ಇರುವುದಿಲ್ಲ.

ಇದೂ ಅಲ್ಲದೆ ವ್ಯಾಸ ಪ್ರತಿಷ್ಠಿತ ಪ್ರಾಣದೇವರು ಆರಡಿ ಎತ್ತರ ವಿರಬಹುದು. ಮೂರಡಿ ಗಿಡ್ಡವಿರಬಹುದು. ಯಾವ ಜಾತಿಯ ಶಿಲೆಯಾದರೂ ಇರಬಹುದು, ಪೂರ್ಣ ಪ್ರಮಾಣ ಮೂರ್ತಿ, ಉಬ್ಬು ಶಿಲ್ಪ, ರೇಖಾಚಿತ್ರ ಏನಾದರೂ ಇರಬಹುದು. ಆದರೆ ಎಲ್ಲಿಯೂ ಗಾರೆಯಿಂಧ, ಕಟ್ಟಿಗೆಯಿಂದ, ಧಾತುವಿನಿಂದ ಮಾಡಿದ್ದು ಪ್ರತಿಷ್ಠೆಗೊಂಡಿಲ್ಲ.

ವ್ಯಾಸತೀರ್ಥರು ತ್ವರಿತಗತಿಯಲ್ಲಿ ಪ್ರತಿಷ್ಠಾಪನೆಗೈಯುತ್ತ ಪಯಣಿಸುತ್ತಿದ್ದ ಕಾರಣ, ಸ್ಥಾನಿಕರೇ ಮೂರ್ತಿ ಸಿದ್ಧಗೊಳಿಸದೇಕಾಗುತ್ತಿತ್ತು. ಅದಕ್ಕೋಸ್ಕರ ಈ ರೀತಿಯ ವ್ಯತ್ಯಾಸ ಕಂಡುಬರುತ್ತವೆ. ಆದಕಾರಣ ವ್ಯಾಸ ಪ್ರತಿಷ್ಠಿತ ಪ್ರಾಣದೇವರ ಶೋಧನೆ ಮಾಡುವಾಗ ಸ್ಥಾನಿಕರ ಸಹಾಯ ಬಹಳ ಮುಖ್ಯ. ಈ ಗುಡಿಗಳ ನಿರ್ವಹಣೆಗೆ ಸ್ಥಾನಿಕರೇ ಭೂಮಿ ದತ್ತಿ ಬಿಟ್ಟುಕೊಂಡುತ್ತಿದ್ದರೆಂದು ಪಹಣಿಗಳಿಂದ ತಿಳಿದು ಬರುತ್ತದೆ.

ಪಟ್ಟಣಕ್ಕೆ ಪಂಚರಾತ್ರಿ, ಹಳ್ಳಿಗೆ ಏಕರಾತ್ರಿ ಎನ್ನುವಂತೆ ವ್ಯಾಸತೀರ್ಥರು ಒಂದೊಂದು ಊರಿನಲ್ಲಿ ಆಯಾ ಊರಿನ ಜನಗಣತಿ ಪ್ರಕಾರ, ಸಮಿತಿಗಳು ಮುಂದೆಬಂದ ಪ್ರಕಾರ ೧, ೨, ೩, ೪, ಪ್ರಾಣದೇವರ ಪ್ರತಿಷ್ಠಾಪನೆ ಮಾಡಿದ್ದಾರೆ.

ವ್ಯಾಸತೀರ್ಥರ ಕಾರ್ಯಕ್ರಮ ಕ್ರಿ.ಶ. ೧೫೩೯ ರವರೆಗೆ ಮುಂದುವರೆದಿದೆ ಎಂದು ಈಗಾಗಲೆ ತಿಳಿಸಿದೆ. ಕ್ರಿ.ಶ. ೧೫೦೩ ರಲ್ಲಿ ಶ್ರೀ ಪಾದರಾಜರು ಬೃಂದಾವನಸ್ಥರಾದ ಕಾರಣ, ಒಂದು ವರ್ಷ ಪ್ರಾಣಪ್ರತಿಷ್ಠಾಪನಾಕಾರ್ಯ ಸ್ಥಗಿತಗೊಂಡಿತ್ತೆಂದೆನಿಸುತ್ತದೆ. ಇದಕ್ಕೆ ಸಾಕ್ಷಿಯಾಗಿ ರಾಯಚೂರು ತಾಲೂಕಿನ ಬಿಚ್ಚಾಲಿ ಗ್ರಾಮದ ತುಂಗಭದ್ರ ದಂಡೆಯ ಮೇಲೆ ವ್ಯಾಸಪ್ರತಿಷ್ಠಿತ ಪ್ರಾಣದೇವರ ಪಕ್ಕದಲ್ಲಿ ಶ್ರೀಪಾದರಾಜರ ಮೃತ್ತಿಕಾ ಬೃಂದಾವನವಿದೆ. ಕೂಡಲ ಸಂಗಮದಲ್ಲಿ ಸಹಿತ ವ್ಯಾಸರಾಯರ ಮಠದಲ್ಲಿಯ ಬೃಂದಾವನ ಶ್ರೀಪಾದರಾಯರದೇ ಇರಬೇಕು.

ವ್ಯಾಸತೀರ್ಥರು ನಿರ್ಧರಿಸಿದ ೭೩೨ ಸಂಖ್ಯೆಯಲ್ಲಿ ಹರಿಕಥಾಮೃತಸಾರವನ್ನೊಳಗೊಂಡ ಸಂಖ್ಯೆ ವಿಶ್ಲೇಷಣೆ ಇರಬಹುದು ಎಂದು ಹುಬ್ಬಳ್ಳಿಯ ಎನ್. ಕೆ. ಇನಾಮತಿಯವರು ತಿಳಿಸಿದ್ದಾರೆ.

ವ್ಯಾಸತೀರ್ಥರು ಯಾವ ಮಾಸ, ಮಿತ್ತಿ, ಮುಹೂರ್ತದಲ್ಲಿ ಯಂತ್ರೋದ್ಧಾರಕ ಪ್ರಾಣದೇವರ ಪ್ರತಿಷ್ಠಾಪನೆಗೈದರೆಂಬ ವಿವರಣೆ ಇಲ್ಲ. ಕೊಪ್ಪಳದ ದಿ: ಬಿಸರಳ್ಳಿ ಗೋವಿಂದಾಚಾರ್ಯರ ವಿವರಣೆ ಈ ರೀತಿಯಿದೆ. ಸಂಖ್ಯೆ ೭೩೨ ರಲ್ಲಿ ಮೂಹೂರ್ತ ನಿರ್ಣಯವಿದೆ. ಇದು ಉಗಾದಿ ಪ್ರತಿಪದೆಯ ಅಥವಾ ಅಕ್ಷಯ ತೃತೀಯದ ಸಾಡೇತೀನ ಮುಹೂರ್ತವೆಂದು ಹೇಳುತ್ತಿದ್ದರೆಂದು ರಾಯಚೂರಿನ ಹೆಚ್. ಜಿ. ಸಾನಬಾಳ ಇವರು ತಿಳಿಸಿದ್ದಾರೆ.

ಇನ್ನೂ ವ್ಯಾಸ ಪ್ರತಿಷ್ಠಿತ ಗುಡಿಗಳನ್ನು ಹುಡುಕಲು ಹೊರಡೋಣ. ಮೇಲೆ ಕಾಣದ ವಿವರಣೆಗಳನ್ನು ವ್ಯಾಸಪ್ರತಿಷ್ಠಿತ ಪ್ರಾಣದೇವರ ಲಕ್ಷಣಗಳನ್ನು ನಾವು ಅಂತರ್ಧ್ಯಾನದಲ್ಲಿ ಮೂಡಿಸಿಕೊಂಡು ಹೊರಡಬೇಕು. ಕಳೆದ ಐದು ನೂರು ವರ್ಷದಲ್ಲಿ ರಾಜಕೀಯ ಪರಿಸ್ಥಿತಿಗಳು ಏರುಪೇರಾಗಿ, ಈ ವ್ಯಾಸ ಪ್ರತಿಷ್ಠಿತ ಪ್ರಾಣದೇವರ ಗುಡಿಗಳು ನಾನಾ ಸ್ಥಿತಿಯಲ್ಲಿವೆ, ಪೂರ್ಣಪ್ರಮಾಣದ ಗುಡಿಗಳು ಬಹಳ ವಿರಳ ಇವೆ. ಆದಕಾರಣ ಮೂರ್ತಿ ಲಕ್ಷಣ ಮಾತ್ರ ನೋಡುತ್ತ ಹೋಗಬೇಕು. ಪರಧರ್ಮಿಯರ ದಬ್ಬಾಳಿಕೆಯಿಂದ, ಸ್ವಧರ್ಮ ನಿರ್ಲಕ್ಷತನದಿಂದ, ಬರಗಾಲ, ಸಂಕ್ರಾಮಿಕ ಜಡ್ಡುಗಳ ಅಟ್ಟಹಾಸದಿಂದ ಈ ಗುಡಿಗಳ ಸ್ಥಿತಿ ಈಗ ಅಲ್ಲೋಲಕಲ್ಲೋಲವಾಗಿವೆ. ಬಹಳಷ್ಟು ಕಡೆ ಅರ್ಚನೆಗೊಳಿಸಿಕೊಳ್ಳುತ್ತಿದ್ದಾನೆ. ಕೆಲವು ಕಡೆ ಪುರಾತನ ಹಳ್ಳಿಗಳು ದೇಚೆರಾಗ (ನಿರ್ವಸಿತ) ಊರುಗಾಳಾಗಿವೆ. ಕೆಲವು ಕಡೆ ಗುಡಿಯು ಸುಸ್ಥಿತಿಯಲ್ಲಿದ್ದು ಹೊಸ (ಅಸಂಪ್ರದಾಯಿಕ) ಮೂರ್ತಿ ಸ್ಥಾಪನೆಯಾಗಿದ್ದರೆ ಮತ್ತೊಂದು ಕಡೆ ಮೂರ್ತಿಯು ಹಳೆಯದ್ದು ಗುಡಿಯ ನಿರ್ಮಾಣ ಅಸಂಪ್ರದಾಯಕ ರೀತಿಯಾಗಿರುತ್ತದೆ. ಆದಕಾರಣ ಸ್ಥಾನಿಕರ ಸಹಕಾರ ಮುಖ್ಯ ಎಂದು ಮೊದಲೇ ತಿಳಿಸಿದೆ. ಕೆಲವು ಕಡೇ ನಾವೇ ಅರಿವು ಮೂಡಿಸಿಬರಬೇಕು.

ಈ ವರೆಗೆ ನಾನು ಸರ್ವೇಕ್ಷಣ ಮಾಡಿದ ಪ್ರಕಾರ ವ್ಯಾಸತೀರ್ಥರು ಪ್ರಾಣದೇವರ ಪ್ರತಿಷ್ಠಾಪನೆಗಾಗಿ ಸಂಚರಿಸಿದ ಹಾದಿಯ ಸ್ಥೂಲ ನಕ್ಷೆ ಹೀಗೆ ಕಂಡುಕೊಂಡಿದ್ದೇನೆ. ಕೊಟ್ಟ ಪ್ರದೇಶದಲ್ಲಿ ಸಂಖ್ಯಾ ಸಾಂದ್ರತೆ ಪ್ರಕಾರ ಹೊರಟರೆ ಅದೋನಿ ರಣ ಮಂಡಲದಲ್ಲಿ ೧೯ ವ್ಯಾ. ಪ್ರ. ಪ್ರಾ. ದೇವರಿದ್ದಾರೆಂದು ತಿಳಿದ ಪ್ರಕಾರ ವ್ಯಾಸತೀರ್ಥರು ಹಂಪಿಯಿಂದ ಬಳ್ಳಾರಿ ಮೂಲಕ ಆದವಾನಿ ತಲುಪಿದರೆಂದು ಹೇಳಬಹುದು. ಹಂಪಿಯ ಸುತ್ತ ೨೦ ಕಿ.ಮಿ. ಸುತ್ತಳತೆಯಲ್ಲಿ ೧೦೦ ವ್ಯಾ.ಪ್ರ. ಪ್ರಾಣದೇವರು ಸಿಗುವ ಸಾಧ್ಯತೆ ಇದೆ. ಬಳ್ಳಾರಿ ಜಿಲ್ಲೆಯಲ್ಲಿ ೨೦--೨೫ ಸಿಕ್ಕರೆ, ಕರ್ನೂಲು, ಕಡಪ, ಚಿತ್ತೂರು ಜಿಲ್ಲೆಗಳಲ್ಲಿ ೩೦೦ ಪ್ರಾಣದೇವರು ಸಿಗುವ ಸಾಧ್ಯತೆ ಇದೆ, ಬೆಂಗಳೂರಿನಲ್ಲಿ ಕೆಂಗಲ್ ಹನುಮಂತರಾಯ ವ್ಯಾ. ಪ್ರ. ಪ್ರಾಣದೇವರು. ಹೀಗೆ ಹಿಂತಿರುಗಿ ಬಂದು ಕೃಷ್ಣ ನದೀಗುಂಟ ಮಹಬೂಬನಗರ ಜಿಲ್ಲೆ, ರಾಯಚೂರು ಜಿಲ್ಲೆ ಗುಲಬರ್ಗ, ಬಿಜಾಪುರ, ಧಾರವಾಡ ಸರ್ವೇಕ್ಷಣ ಮಾಡಿದರೆ ೭೩೨ ಪ್ರಾಣದೇವರು ಸಿಗುವಲ್ಲಿ ಸಂದೇಹವಿಲ್ಲ ಈವರೆಗೆ ಈ ಜಿಲ್ಲೆಗಳಲ್ಲಿ ಸಂಚರಿಸಿ ೨೧೦ ವ್ಯಾಸಪ್ರತಿಷ್ಠಿತ ಪ್ರಾಣದೇವರ ಗುಡಿಗಳನ್ನು ಗುರುತಿಸಿದ್ದೇನೆ. ಈವರೆಗೆ ನಾನು ನೋಡಿದವುಗಳಲ್ಲಿ ಕಡಪ ಜಿಲ್ಲೆಯ ಪುಲಿವೆಂದಲ ಪಟ್ಟಣದಲ್ಲಿದ್ದ ಮಾರ್ಕೆಟ್ ಆಂಜನೇಯಸ್ವಾಮಿ ಶ್ರೇಷ್ಠನಾದದ್ದು, ಆಂಜನೇಯನು ಆರಡಿ ಎತ್ತರದ ಸುಂದರ ಸಂಪೂರ್ಣಮೂರ್ತಿ, ವಿಜಯನಗರ ಸಮಯದಲ್ಲಿ ನಿರ್ಮಿಸಿದ್ದ ಮೂಲ ಶಿಲ್ಪದ ಗುಡಿ ಆಕಸ್ಮಾತ್ ಯಥಾಸ್ಥಿತಿಯಲ್ಲಿ ಮುಕ್ಕಾಗದೆ ಉಳಿದಿದೆ. ಆಂಜನೇಯನಿಗೆ ಮೂರಡಿ ಎತ್ತರ ಪಾಣಿ ಪೀಠವಿದೆ. ಮಧ್ಯದಲ್ಲಿ ವಿಜಯನಗರ ಶಿಲ್ಪ ಸಂಕೇತಗಳಲ್ಲೊಂದಾದ ಸಿಂಹಲಾಲಾಟ ವಿದೆ. ಕಂಬದ ಮೇಲೆ ಬಾಳೆಗೊನೆ ಬೋದಿಗೆಗಳು, ಕಂಡಿಯಲ್ಲಿ ದಶಾವತಾರ, ವಿಜಯನಗರ ಶೈಲಿ ಗೋಪುರದ ಉಬ್ಬು ಶಿಲ್ಪಗಳಿವೆ. ಆಂಜನೇಯನ ಈಶಾನ್ಯಕ್ಕೆ ಈಶ್ವರ ಲಿಂಗವಿದೆ. ಇದು ವ್ಯಾಸಪ್ರತಿಷ್ಠಿತ ಪ್ರಾಣದೇವರ ಗುಡಿ ಪೂರ್ಣಕಲ್ಪನೆ ಕೊಡುತ್ತದೆ. ಇಲ್ಲಿಯ ಈಶ್ವರ ಲಿಂಗಕ್ಕೆ ಐತಿಹಾಸಿಕ ಹಿನ್ನೆಲೆ ಉಂಟು. ವ್ಯಾಸತೀರ್ಥರೊಂದಿಗೆ ವಾದ ವಿವಾದದಲ್ಲಿ ಸೋತ ಕಳಿಂಗ ದೇಶದ ಆಸ್ಥಾನ ಪಂಡಿತ ಬಸವಭಟ್ಟನು, ಶ್ರೀಗಳಿಗೆ ಪಚ್ಚೆಲಿಂಗವನ್ನು ಕಾಣಿಕೆಯಾಗಿ ಕೊಟ್ಟಿದ್ದನು, ಶಿವರಾತ್ರಿಯಂದು ವ್ಯಾಸತೀರ್ಥರು ಈ ಲಿಂಗಕ್ಕೆ ಪೂಜೆಗೈಯುತ್ತಿದ್ದರು. ಈ ಸಂದರ್ಭದ ದ್ಯೋತಕವಾಗಿ, ವ್ಯಾಸ ಪ್ರತಿಷ್ಠಿತ ಪ್ರಾಣದೇವರ ಗುಡಿಯಲ್ಲಿ ಈಶ್ವರ

(31 ನೇ ಪುಟ ನೋಡಿ)

# ಶ್ರೀ ಜ್ಞಾನದೇವರು

---ಡಿ. ಕೆ. ರಾಮಕೃಷ್ಣರಾವ್.

ಗೀತೆಯನ್ನು ಅರ್ಥಮಾಡಿಕೊಂಡು, ಭಾಷ್ಯವನ್ನು ಬರೆಯಲು ಕೇವಲ ಪಾಂಡಿತ್ಯಸಾಲದು, ಭಕ್ತನು, ಪರಮಜ್ಞಾನಿಯೂ ನಿಷ್ಕಾಮಕರ್ಮಿಯೂ, ಪ್ರಯತ್ನಶೀಲನೂ, ಶ್ರದ್ಧೋತ್ಸಾಹದಿಂದ ಜೀವನ ನೌಕೆಯನ್ನು ನಡೆಸುವ, ಅನುಭವಿಸುವ, ಅನುಭವಿಗೆ ಮಾತ್ರ ಈ ಭಗವದ್ಗೀತೆಗೆ ಭಾಷ್ಯವನ್ನು ಬರೆಯಲು ಸಾಧ್ಯ. ಇಂತ ಅನುಭವಿಗಳು ಅನೇಕ ಜನ್ಮಗಳಲ್ಲಿ ಯೋಗವ್ಯವಸಾಯ ಮಾಡಿರಬೇಕು, ಹೀಗೆ ಯೋಗ ವ್ಯವಸಾಯನ್ನು ಮಾಡಿರುವರೂ ಕೋಟಿಗೊಬ್ಬರು. ಇಂತಹ ಮಹಾತ್ಮರನ್ನು ಈಶ್ವರನ ಅವತಾರವೆನ್ನದೇಕು. ಇಂತವರು ಲೋಕದಲ್ಲಿ ಆಗಾಗ್ಗೆ ಜನ್ಮವೆತ್ತಿ ತಮ್ಮ ನಡೆನುಡಿಗಳಿಂದ ಮಾನವಕುಲಕ್ಕೆ ಶ್ರೇಯಸ್ಸನ್ನು ಮಾಡುತ್ತಿರುವುದು ಪರಮಾತ್ಮನ ಕರುಣೆಯೇ. ಇಂತವರಲ್ಲಿ ನಮ್ಮ ಜ್ಞಾನೇಶ್ವರ ಮಹಾರಾಜರೊಬ್ಬರು. ಇವರು ಮಹಾರಾಷ್ಟ್ರದೇಶದವರು. ಶಾಸ್ತ್ರವೇತ್ತರು, ವೇದಪಾರಂಗತರು, ಭಕ್ತಿವಂತರು, ಧರ್ಮನಿಷ್ಠರೂ ಆದ ಸದ್ಗೃಹಸ್ತರ ವಂಶದಲ್ಲಿ ಸುಮಾರು ೭೦೦ ವರುಷಗಳ ಕೆಳಗೆ ಜನಿಸಿದರು. ಇವರು ಕೇವಲ ೧೫ ನೇ ವಯಸ್ಸಿನಲ್ಲಿಯೇ ಭಗವದ್ಗೀತೆಗೆ ಭಾಷ್ಯವನ್ನು ಹೊಸರೀತಿಯಲ್ಲಿ, ಪ್ರವಚನರೂಪವಾಗಿ, ಬಹುಸರಳವಾಗಿ ಉಪಮಾನ, ಉಪಮೇಯಗಳೊಡನೆ ರಚಿಸಿದರು. ಮೂಲ ಸಂಸ್ಕೃತ ಭಾಷೆಯ ಗ್ರಂಥದ ಸಾರವನ್ನು ತಮ್ಮ ದೇಶೀಯವಾದ ಮಹಾರಾಷ್ಟ್ರ ಭಾಷೆಯಲ್ಲಿ ಸರಳವಾಗಿ ವಿಶದೀಕರಿಸಿದ ಈ ಜ್ಞಾನೇಶ್ವರಿಗೀತಾಮೃತವು ಪೂರ್ವಜನ್ಮದ ಪುಣ್ಯಪರಿಪಾಕದಿಂದ ಕನ್ನಡಿಗರ ಸುಕೃತದಿಂದ ಶ್ರೀ ಸ್ವಾಮಿ ಕೃಷ್ಣಾನಂದಭಾರತಿಯವರು ಕೈಗೆ ದೊರಕಿ ಕನ್ನಡ ಭಾಷೆಯಲ್ಲಿ ಬರೆಯಲಾಗಿದೆ. ಜ್ಞಾನೇಶ್ವರರು ಮಹಾರಾಷ್ಟ್ರದಲ್ಲಿ ಜನಿಸಿದ ಪೂರ್ಣಯೋಗಿಗಳಾದ ಮಹಾತ್ಮರಲ್ಲಿ ಅಗ್ರಗಣ್ಯರಾದವರ ಪೈಕಿ ಸೇರಿದ್ದರು. ಇಂದಿಗೂ ಅವರ ಗೀತಾವ್ಯಾಖ್ಯಾನದಲ್ಲಿ ಮಹಾರಾಷ್ಟ್ರದವರಿಗೆ ಎಷ್ಟೋ ಗೌರವವಿದೆ ಎಂಬುದನ್ನು ಪೂನಾ ಮುಂತಾದ ನಗರಗಳಲ್ಲಿಗೆ ಹೋಗಿ ನಾವು ಗ್ರಹಿಸಬಹುದು.

ಮಹಾರಾಷ್ಟ್ರವು ವೀರರನಾಡು. ಮತ್ತು ಭಾರತ ಸಂಸ್ಕೃತಿಯನ್ನು ಉಳಿಸಲಿಕ್ಕೆ ಆಧಾರವಾದ ಶಿವಾಜಿ ಮಹಾರಾಜರ ಜನ್ಮಭೂಮಿ. ಮಹಾರಾಷ್ಟ್ರ ಅಂತೆಯೇ ಸಾದುಸಂತರ ನೆಲೆವೀಡು ಮಹಾರಾಷ್ಟ್ರ. ಧಾರ್ಮಿಕ ಪ್ರಪಂಚದಲ್ಲಿ ಕೀರ್ತಿವೇತ್ತ ಸಾಧು ತುಕಾರಾಂ, ಸಮರ್ಥರಾಮದಾಸ್, ಮೊದಲಾದವರು ಜನ್ಮಿಸಿದ ಪವಿತ್ರಭೂಮಿ. ಹಾಗೂ ಮಹಾರಾಷ್ಟ್ರದಲ್ಲಿ ಜನ್ಮಿಸಿದ ಮಹಾತ್ಮರಲ್ಲಿ ಜ್ಞಾನೇಶ್ವರರೂ ಪ್ರಥಮ ಶ್ರೇಣಿಯವರು. ಇವರ ಕಾಲಮಾನವು ಸುಮಾರು ೭೦೦ ವರ್ಷಗಳಾಗಿದ್ದರೂ ಇವರು ಅತ್ಯುತ್ತಮ ಶ್ರೇಣಿಗೆ ಸೇರಿದ ತತ್ವವೇತ್ತರೂ, ಈಶ್ವರ ಭಕ್ತರೂ, ಪೂರ್ಣಯೋಗಿಗಳು ಅದ್ಭುತ ಚಾರಿತ್ರ ಉಳ್ಳವರೂ ಆಗಿರುವರು.

ಪೈಠಣಕ್ಕೆ ನಾಲ್ಕು ಹರಿದಾರಿ, ಗೋದಾವರಿ ತೀರದಲ್ಲಿರುವ ಅಪೇ ಗ್ರಾಮವೇ ಶ್ರೀ ಜ್ಞಾನೇಶ್ವರರ ಜನ್ಮಸ್ಥಳ. ಇವರು ಯಜುರ್ವೇದಿ ಬ್ರಾಹ್ಮಣರು, ಶಾನುಭೋಗರ ಮನೆತನದವರು. ಇವರ ತಂದೆ ವಿಠಲಪಂತರು. ವೇದಶಾಸ್ತ್ರಗಳನ್ನು ಚೆನ್ನಾಗಿ ಬಲ್ಲವರು. ಜ್ಞಾನಿಗಳೂ ಈಶ್ವರ ಭಕ್ತಿಯುಳ್ಳವರು ಆಗಿದ್ದುದರಫಲವಾಗಿ ಗೃಹಸ್ತಾಶ್ರಮದಲ್ಲಿ ಉದಾಸೀನತೆಯುಂಟಾಗಿ ತೀರ್ಥಯಾತ್ರೆ, ಸಾದುಸಂತರ ಸಾಂಗತ್ಯ, ಈಶ್ವರ ಭಕ್ತಿ ಇವುಗಳಲ್ಲಿ ಸದಾನಿರತರಾಗಿದ್ದರು. ಇದರಿಂದಲೇ ಈಶ್ವರೇಚ್ಛಗನುಸಾರವಾಗಿ ವಿಠಲಪಂತರು ಸಿದ್ಧೋಪಂತರ ಮಗಳು ರುಕ್ಮಿಣಿಯನ್ನು ವಿವಾಹ ಮಾಡಿಕೊಂಡು ಗೃಹಸ್ತಾಶ್ರಮವನ್ನು ಸ್ವೀಕರಿಸಿದರು.

ಇವರಿಗೆ ಸಂತಾನವು ಬಹಳ ದಿನಗಳವರೆಗೆ ಆಗದ್ದರಿಂದ ವಿರಕ್ತಿಯಾಗಿ ಸಂಸಾರವನ್ನು ತ್ಯಜಿಸಿ ಕಾಶಿಗೆ ಹೋಗಿ ಶ್ರೀ ರಮಾನಂದಸ್ವಾಮಿಯವರ ಸೇವೆಯಲ್ಲಿ ನಿರತರಾದರು. ಹೀಗಿರುವಲ್ಲಿ ಒಂದು ದಿನ ವಿಠಲಪಂತನು ಗುರುಗಳನ್ನು ಕುರಿತು ತಾನು ಏಕಾಗಿಯಂತಲು, ಹೆಂಡತಿ ಮಕ್ಕಳಿಲ್ಲವೆಂತಲು, ತಿಳಿಸಿ ತನಗೆ ಸಂನ್ಯಾಸ ದೀಕ್ಷೆಯನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಲು, ಆತನು ಅದಕ್ಕೆ ಸಮ್ಮತಿಸಿ ಸನ್ಯಾಸ ದೀಕ್ಷೆಯನ್ನು ಕೊಟ್ಟರು.

ವಿಠಲ ಪಂತರು ಈ ರೀತಿ ಮನೆಯಿಂದ ಹೋದ ಬಳಿಕ ರುಕ್ಮಿಣೀಬಾಯಿ ಬಹು ದುಃಖಿತಳಾದಳು. ಕೊನೆಗೆ ತನ್ನ ಪತಿದೇವನು ಕಾಶಿಯಲ್ಲಿ ಸನ್ಯಾಸವನ್ನು ಸ್ವೀಕರಿಸಿದ ವಿಚಾರವು ಹೇಗೋ ತಿಳಿದು ಶೋಕಾಂಧಕಾರದಲ್ಲಿ ಮುಳುಗಿದಳು. ಈ ರೀತಿಯಾಗಿ ೧೨ ವರುಷಗಳು ಉರುಳಿದವು. ಆದರೂ ಪಂತರು ಹಿಂತಿರುಗಲಿಲ್ಲ. ಪತಿಭಕ್ತಿ ಪಾರಾಯಣಳಾದ ಈ ಸತೀಮಣಿಯು ತನ್ನ ಪತಿಪ್ರೇಮವನ್ನು ಭಗವಂತನ ಕಡೆಗೆ ಹರಿಸಿದಳು. ಅನನ್ಯ ಭಕ್ತಿಯಿಂದ ದೇವರಲ್ಲಿ ಪ್ರಾರ್ಥಿಸಿದಳು. ಭಗವಂತನು ಕರುಣಾಳು. ಆತನ ಸರ್ವಪರೀಕ್ಷೆಯು ಮುಗಿಯಿತು. ಭಗವಂತನ ಪ್ರೇರಣೆಯಂತೆ ರಾಮಾನಂದಸ್ವಾಮಿಗಳು ತಮ್ಮ ಶಿಷ್ಯರ ಸಮೇತ ರಾಮೇಶ್ವರ ಯಾತ್ರೆಗೆ ಹೊರಟರು. ಮಧ್ಯ ಮಾರ್ಗದಲ್ಲಿ ಬರುತ್ತಾ ಅವರು ಶಿಷ್ಯರ ಸಮೇತ ಅಲಂದಿಗ್ರಾಮದಲ್ಲಿ ಬಿಡಾರಮಾಡಿದರು. ಇದನ್ನು ತಿಳಿದು ರುಕ್ಮಿಣೀಬಾಯಿ ಅವರಲ್ಲಿ ಭಕ್ತಿ ಪೂರ್ವಕವಾಗಿ ಪ್ರಣಾಮಮಾಡಿದಳು. ನಂತರ ಸಮಾಚಾರ ತಿಳಿದು ವಿಠಲನನ್ನು ಕರೆದು ಗೃಹಸ್ಥನಾಗಿ ಜೀವನ ನಡೆಸಬೇಕೆಂದು ಗುರುಗಳು ಆಜ್ಞೆಮಾಡಿದರು. ವಿಠಲನು ಗುರುಗಳ ಆಜ್ಞೆಯಂತೆ ಸನ್ಯಾಸದಿಂದ ಗೃಹಸ್ತಾಶ್ರಮಕ್ಕೆ ಹಿಂತಿರುಗಿದನು. ಇದನ್ನು ಸಮಾಜವು ಸಹಿಸಲಿಲ್ಲ. ಈ ಯೋಚನೆಯಿಂದ ಎಲ್ಲರೂ ಅವರನ್ನು ನಿಂದಿಸುವುದಕ್ಕೆ ಪ್ರಯತ್ನಪಟ್ಟರು. ಬ್ರಾಹ್ಮಣರೆಲ್ಲ ಇವರನ್ನು ಸಮಾಜದಿಂದ ಬಹಿಷ್ಕರಿಸಿದರು.

ಜನರ ನಿಂದನೆ ಹೆಚ್ಚಿದಂತೆಲ್ಲ ವಿಠಲಪಂತರು ಶಾಸ್ತ್ರಾಧ್ಯಯನ, ಆತ್ಮಚಿಂತನೆ, ಈಶ್ವರ ಚಿಂತನೆಯಲ್ಲಿ ಕಾಲಕಳೆಯುತ್ತ ಲೋಕನಿಂದೆಗೆ ಲಕ್ಷ್ಯಕೊಟ್ಟಿಲ್ಲವಾದರು. ಗೃಹಸ್ಥಾಶ್ರಮಕ್ಕೆ ಹಿಂತಿರುಗಿದ ಕೂಡಲೆ ಅವರಿಗೆ ಶೀಘ್ರವಾಗಿಯೇ ಸಂತಾನವಾಗತೊಡಗಿತು. ಸ್ವಲ್ಪಕಾಲದಲ್ಲಿಯೇ ೩ ಗಂಡು ಮಕ್ಕಳು ೧ ಹೆಣ್ಣುಮಗು ಆಯಿತು. ನಿವೃತ್ತಿನಾಥನು (೧೧೯೫) ಮೊದಲನೆಯವನಾಗಿಯು, ಜ್ಞಾನದೇವರು (೧೧೯೭) ಅನಂತರ ಸೋಪಾನದೇವರು (೧೧೯೯) ಕಡೆಯದಾಗಿ ಮುಕ್ತಾಬಾಯಿ (೧೨೦೧) ಜನಿಸಿದರು.

ಆದಿನಗಳಲ್ಲಿ ವಿಠಲನ ಸ್ಥಿತಿಯು ಅತ್ಯಂತ ಶೋಚನೀಯವಾಗಿತ್ತು. ಭಿಕ್ಷವು ಸಿಕ್ಕುತ್ತಿರಲಿಲ್ಲ. ಅವರು ಒಂದೊಂದು ವೇಳೆ ಫಲಮೂಲಗಳನ್ನೂ ಒಮ್ಮೊಮ್ಮೆ ಜಲವನ್ನು ಪಾನಮಾಡುತ್ತ ಜೀವಿಸಬೇಕಾಯಿತು. ಆದರೆ ಮಕ್ಕಳು ಬಹು ಸೂಕ್ಷ್ಮಬುದ್ಧಿ ಉಳ್ಳವರಾಗಿಯು ಶಾಸ್ತ್ರಗಳಲ್ಲಿ ಪಂಡಿತರಾಗಿಯು ಇದ್ದರು. ಹಿರಿಯವನಿಗೆ (ನಿವೃತ್ತನಾಥನಿಗೆ) ೭ ವರ್ಷವಯಸ್ಸಾದ್ದರಿಂದ ಉಪನಯನ ಸಂಸ್ಕಾರ ನಡೆಸಬೇಕಾಗಿ ಬಂತು. ಆದುದರಿಂದ ತಮ್ಮ ಕಾರ್ಯಕ್ಕೆ ಬ್ರಾಹ್ಮಣರನ್ನು ನೆರವಾಗಲೆಂದು ಪ್ರಾರ್ಥಿಸಿಕೊಂಡರು. ಆದರೆ ಇವರ ಪ್ರಾರ್ಥನೆಯು ನಿಷ್ಫಲವಾಯ್ತು.

ಎಲ್ಲಾ ವಿಧದಿಂದಲು ನಿರಾಶನಾದ ವಿಠಲ ಪಂತರು ತನ್ನ ಸಂಸಾರದೊಂದಿಗೆ ತ್ರಂಬಕೇಶ್ವರಕ್ಕೆ ಹೋಗಿ ಅಲ್ಲಿ ನೆಲಸಿದರು. ಹೀಗಿರಲು ಒಂದು ದಿನ ನಿವೃತ್ತಿನಾಥನು ಅಂಜನೀಪರ್ವತದ ಗುಹೆಯಲ್ಲಿ ಪ್ರವೇಶಿಸಲು, ಆ ಗುಹೆಯಲ್ಲಿ ನಾಥ ಸಾಂಪ್ರದಾಯಕ್ಕೆ ಶೇರಿದ "ಗಹನಿನಾಥರು" ತಪಸ್ಸು ಮಾಡುತ್ತಿರಲು, ಅವರ ಚರಣಕ್ಕೆ ನಮಸ್ಕರಿಸಿದನು. ಆಗ ಗಹನಿನಾಥರು ಇವರ ಮೇಲೆ ಕೃಪೆಯುಂಟಾಗಿ ಅವರು ಇವರಿಗೆ "ರಾಮಕೃಷ್ಣಹರಿ" ಎಂಬ ಮಂತ್ರೋಪದೇಶವನ್ನು ಕೊಟ್ಟು ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿಯೋಗದಲ್ಲಿ ಅವರಿಗೆ ಕೃಷ್ಣೋಪಾಸನೆಯನ್ನು ಪ್ರಚಾರಮಾಡುವಂತೆ ಆಜ್ಞಾಪಿಸಿದರು. ಅನಂತರ ನಿವೃತ್ತಿ ನಾಥನು ಹೊರಟು ಪುನಃ ತಂದೆ ತಾಯಿಗಳನ್ನು ಸೇರಿದನು.

ವಿಠಲ ಪಂತರು ಎಂದಿನಂತೆಯೇ ಕಾಲಕಳೆಯುತ್ತಿದ್ದು ಮಕ್ಕಳಿಗೆ ಉಪನಯನ ಸಂಸ್ಕಾರವು ನಡೆಯಲಿಲ್ಲವಲ್ಲಾ ಎನ್ನುವ ಕೊರಗಿನಿಂದಲೆ ತನ್ನ ಮಕ್ಕಳನ್ನೆಲ್ಲ ಈಶ್ವರನ ಬರವಸೆಯಲ್ಲಿಟ್ಟು ತಮ್ಮ ಹೆಂಡತಿ ಸಮೇತರಾಗಿ ಪ್ರಯಾಗವನ್ನು ಸೇರಿ ಅಲ್ಲಿ ಜಲಸಮಾದಿಯಾದರು.

ವಿಠಲರ ಮಕ್ಕಳು ಅನಾಥರು, ಅಸಹಾಯಕರೂ ಆಗಿ ತಿರುಗುತ್ತಾ ತಮ್ಮ ಜೀವನವನ್ನು ನಿರ್ವಹಿಸಿಕೊಳ್ಳುತ್ತಿದ್ದರು. ಬಾಲಕರು ಬುದ್ಧಿವಂತರಾಗಿಯು ಶೀಲವಂತರಾಗಿಯೂ ಇದ್ದು ಪವಿತ್ರ ಜೀವನ ನಡೆಸುತ್ತಿದ್ದರು. ಪೈಠಣದ ಬ್ರಾಹ್ಮಣರಿಗೆ ಅವರ ಮೇಲೆ ದಯೆ ಬಂದಿತು. ಕೆಲವು ಬ್ರಾಹ್ಮಣರು ಶುದ್ಧಿ ಸಂಸ್ಕಾರವನ್ನು ಮಾಡಿ ಇವರನ್ನು ಕುಲದಲ್ಲಿ ಸೇರಿಸಿಕೊಳ್ಳಬೇಕೆಂದು ಯೋಚಿಸಿದರು. ಇವಕ್ಕಾಗಿ ಶಾಸ್ತ್ರಗಳನ್ನು ಶೋಧಿಸಿದರು. ಇದರ ಸಂಬಂಧವಾದ ಪ್ರಾಯಶ್ಚಿತ್ತವುದೊರೆಯಲಿಲ್ಲ. ಆಗ ಅವರಿಗೆ ಅವರಲ್ಲಿ ವಿಶೇಷ ದಯ ಉಂಟಾಗಿ ನಿರಂಜನ ಮಾಧವನೆಂಬುವರು ಈ ಕೆಳಗಿನ ನಿರ್ಣಯವನ್ನು ಅಂಗೀಕರಿಸಲು ತಿಳಿಸಿದರು.

"ನೀವುಗಳು ಹರಿಪಾದಪದ್ಮದಲ್ಲಿ ಅನನ್ಯ ಭಕ್ತಿಯುಳ್ಳವರಾಗಿ, ಈಶ್ವರನ ಭಜನೆ ಮಾಡುತ್ತ, ಅಖಂಡ ಜಿತೇಂದ್ರಿಯರಾಗಿ, ನಿಮ್ಮ ಶರೀರಗಳನ್ನು ವೈರಾಗ್ಯ ಮತ್ತು ಯೋಗ ಮಾರ್ಗದಲ್ಲಿ ನಿಮಗ್ನಮಾಡಿರಿ" ಎಂದು ತಿಳಿಸಿದರು.

ಬ್ರಾಹ್ಮಣರು ಮಾಡಿದ ನಿರ್ಣಯಕ್ಕೆ ನಿವೃತ್ತಿದೇವರು ಸೋಪಾನದೇವರು ಈ ನಿರ್ಣಯ ಸ್ವೀಕರಿಸಲು ಸ್ವಲ್ಪ ಸಂಕೋಚ ಪಟ್ಟರು. ಆದರೂ ಜ್ಞಾನದೇವರ ಪ್ರೋತ್ಸಾಹದಿಂದ ಅವರೂ ಸಹ ಅಂಗೀಕರಿಸಿದರು.

ಈ ರೀತಿ ಪೈಠಣದ ಬ್ರಾಹ್ಮಣರ ಆಜ್ಞೆಗನುಸಾರವಾಗಿ ಆ ಮೂವರು ಬ್ರಾಹ್ಮಣರು ಮತ್ತು ಮುಕ್ತಾಬಾಯಿಯೂ ಸಹ ಬ್ರಹ್ಮಚರ್ಯ ಪೂರ್ವಕ ತಮ್ಮ ಸಮಾಜದಲ್ಲಿ ವಾಸಿಸತೊಡಗಿದರು. ಅನಂತರ ನಾಲ್ವರು ಪೈಠಣದಿಂದ ಹೊರಟು ಸೇವಾಗ್ರಾಮವನ್ನು ಸೇರಿ ಅಲ್ಲಿ ವಾಸಿಸುತ್ತಿದ್ದರು. ಜ್ಞಾನದೇವರು ಈ ಗ್ರಾಮದಲ್ಲಿದ್ದಾಗ ಒಬ್ಬ ಸ್ತ್ರೀಯು ತನ್ನ ಪತಿಯ ಶವವನ್ನು ತೊಡೆಯಮೇಲೆ ಹಾಕಿಕೊಂಡು ವ್ಯಥೆ ಪಡುತ್ತಿದ್ದಳು. ಸತ್ತಿರುವ ಪತಿಯ ಹೆಸರು ಸಚ್ಚಿದಾನಂದನೆಂಬುವುದನ್ನು ತಿಳಿದುಕೊಂಡು ಆ ಮೃತ ಶರೀರವನ್ನು ಸ್ಪರ್ಶಿಸುತ್ತಲೇ ಆತನು ಎದ್ದುನಿಂತನು. ಆ ವ್ಯಕ್ತಿಯು ಅಲ್ಲಿಂದ ಮುಂದೆ ಸಚ್ಚಿದಾನಂದ ಬಾಬ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಜ್ಞಾನದೇವರು ಶಾಲಿವಾಹನ ಶಕ ೧೨೧೨ ಕ್ಕೆ ಸರಿಯಾದ ವಿಕ್ರಮ ಶಕಸಸಂವತ್ಸರ ೧೩೪೭ ರಲ್ಲಿ ಅಂದರೆ ಕ್ರಿ.ಶ. ೧೨೯೦ ಸಂವತ್ಸರದಲ್ಲಿ ಸೇವಾಗ್ರಾಮದಲ್ಲಿ ಮಹಾಲಯದೇವಿಯ ಮಂದಿರದಲ್ಲಿ ತಮ್ಮ ಜ್ಞಾನೇಶ್ವರಿ ಎಂಬ ಗ್ರಂಥವನ್ನು ರಚಿಸಿದರು. ಈ ಗ್ರಂಥವನ್ನು ಬರೆಯುವಾಗ ಶ್ರೀ ಜ್ಞಾನದೇವರಿಗೆ ಕೇವಲ ೧೫ ವರುಷಗಳು.

ಜ್ಞಾನೇಶ್ವರ ಎಂಬ ಗ್ರಂಥವು ಸಮಾಪ್ತವಾದ ಮೇಲೆ ಜ್ಞಾನದೇವರು ತೀರ್ಥಯಾತ್ರೆಗೆ ಹೊರಟರು. ಈ ತೀರ್ಥಯಾತ್ರಾ ಸಮಯದಲ್ಲಿ ಇವರ ಸಂಗಡ ಸುಪ್ರಸಿದ್ಧ ಮಹಾತ್ಮರಾದ ನಾಮದೇವರಿದ್ದರು. ಕೆಲವು ಭಕ್ತರು ಸಂತರೂ ಇದ್ದರೆಂದು ಮತ್ತೆ ಕೆಲವರ ಅಭಿಪ್ರಾಯಪಡುತ್ತಾರೆ.

ನಾಮದೇವರು ಪಂಢರಾಪುರದ ವಾಸಿಗಳು. ಇವರಿಗೆ ವಿಠಲದೇವರ ದರ್ಶನವಾಗಿದ್ದಿತು. ಅವರ ಸಂಗಡ ವಿಠಲದೇವರು ಪ್ರತ್ಯಕ್ಷವಾಗಿ ಮಾತುಕತೆಗಳನ್ನು ನಡೆಸಿದರೆಂದೂ ಪ್ರಸಿದ್ಧಿಯಿದೆ.

ಇದರಿಂದ ಜ್ಞಾನದೇವರು ಪ್ರಥಮದಲ್ಲಿ ಪಂಢರಾಪುರವನ್ನು ಸೇರಿ ಆ ನಾಮದೇವರನ್ನು ಸಂಗಡ ತೀರ್ಥಯಾತ್ರೆಗೆ ಬರುವಂತೆ ಪ್ರಾರ್ಥಿಸಿದರು. ಆಗ ನಾಮದೇವರು ವಿಠಲ ಭಗವಂತನ ಆಜ್ಞೆಯನ್ನು ಕೋರಿದರು. ಅದರ ಮೇಲೆ ಭಗವಂತನು, "ಈ ಜ್ಞಾನೇಶ್ವರನು ಪ್ರತ್ಯಕ್ಷ ಪರಬ್ರಹ್ಮಸ್ವರೂಪನು; ಇವನ ಸಂಗಡ ಹೋದರೆ ನಿನಗೆ ಕಲ್ಯಾಣವಾಗುವುದು" ಎಂದು ಹೇಳಿದನು. ಇಷ್ಟೇ ಅಲ್ಲ ಹೇಳುವಾಗ ಸ್ವಯಂಭಗವಂತನು ನಾಮದೇವ ಮತ್ತು ಜ್ಞಾನದೇವರ ಕೈಯನ್ನು ಹಿಡಿದುಕೊಂಡು "ಈತ ನನ್ನು ಉದ್ಧರಿಸು ಈತನು ನನಗೆ ಪರಮ ಪ್ರಿಯನು" ಎಂದು ಹೇಳಿದನು. ಅಂದಿನಿಂದ ನಾಮದೇವರು ಅವರ ಸಂಗಡ ಹೊರಟರು. ಆ ತೀರ್ಥಯಾತ್ರೆಯಲ್ಲಿ ಜ್ಞಾನದೇವರು ಪ್ರಯಾಗ, ಕಾಶಿ, ಗಯಾ, ಅಯೋಧ್ಯ, ಗೋಕುಲ, ಬೃಂದಾವನ ದ್ವಾರಕ, ಗಿರಿನಾರ್, ಮಾರ್ವಾಡ, ಪಂಜಾಬ್ ಮೊದಲಾದ ಪ್ರಸಿದ್ಧ ಸ್ಥಳಗಳಿಗೆ ಹೋಗಿ ವೈಷ್ಣವ ಮತವನ್ನು ಪ್ರಚಾರಮಾಡಿದರು. ಅವರು ಹೋದಕಡೆಯಲ್ಲೆಲ್ಲಾ ಜನರು ಆಶ್ಚರ್ಯಪಡುವಂತೆ ಅಪೂರ್ವ ಮಹತ್ವಗಳನ್ನು ತೋರಿಸುತ್ತಿದ್ದರು. ತೀರ್ಥಯಾತ್ರೆ ಮುಗಿದ ನಂತರ ಅವರು ಹಿಂತಿರುಗಿ ಪಂಡರಾಪುರವನ್ನು ಸೇರಿ ಅಲ್ಲಿ ಒಂದು ದೊಡ್ಡ ಉತ್ಸವವನ್ನು ಮಾಡಿದರು. ಆ ಉತ್ಸವಕ್ಕೆ ಅನೇಕ ಮಂದಿ ಸಂತರು, ಮಹಾತ್ಮರು ಸಮ್ಮಿಲಿತರಾದರು. ಉತ್ಸವವಾದ ಅನಂತರ ಜ್ಞಾನದೇವರು ತಮ್ಮ ಸಹೋದರ ಸಹೋದರಿಯರೊಡನೆ ಅಲಂದಿಗೆ ಬಂದರು. ಅನಂತರ ಕ್ರಿಸ್ತ ಶಕ ೧೨೯೬ ಮಾರ್ಗಶಿರ ಬಹುಳ ೧೩ ಗುರುವಾರ ಮಧ್ಯಾಹ್ನ ಜೀವಸಮಾಧಿ ಹೊಂದಿದರು. ಇವಾದ ೨ ವರುಷಗಳ ನಂತರ ಸೋಪಾನದೇವರು, ನಿವೃತ್ತಿನಾಥರು ಮತ್ತು ಮುಕ್ತಾಬಾಯಿ ಸಹ ಸಮಾಧಿ ಹೊಂದಿದರು. ಸಮಾಧಿ ಹೊಂದುವ ಸಮಯದಲ್ಲಿ ಜ್ಞಾನದೇವರಿಗೆ ಕೇವಲ ೨೧ ವರ್ಷ ೩ ತಿಂಗಳ ೫ ದಿನಗಳಾಗಿದ್ದಿತು. ೧೫ ನೇ ವರ್ಷದಲ್ಲಿ ಜ್ಞಾನೇಶ್ವರಿಯನ್ನು ರಚಿಸಿದರು. ಇದೂ ಅಲ್ಲದೆ ಇನ್ನೂ ಚಿಕ್ಕ ವಯಸ್ಸಿನಲ್ಲಿಯೇ ಅನುಭವಾಮೃತ, ಯೋಗವಾಶಿಷ್ಠಾದಿಗಳಿಗೆ ಟಿಪ್ಪಣಿಗಳನ್ನು ಇನ್ನೂ ಎಷ್ಟೋ ಗ್ರಂಥಗಳನ್ನು ರಚಿಸಿದರು. ಜ್ಞಾನದೇವರ ಸಂಬಂಧದಲ್ಲಿ ಅನೇಕ ಮಹಿಮಾಪೂರಿತ ಕಥೆಗಳಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ವರ್ಣಿಸಲಾಗಿದೆ.

ಬ್ರಾಹ್ಮಣರು ಶುದ್ಧಿ ಸಂಸ್ಕಾರವಿಧಾನವನ್ನು ಹೇಳುವಾಗ ನಿವೃತ್ತಿನಾಥರು "ನಾನು ನಿವೃತ್ತಿಯಾದುದರಿಂದ ನನಗೆ ಪ್ರವೃತ್ತಿಯಲ್ಲಿ ಯಾವ ಸಂಬಂಧವು ಇಲ್ಲ" ಎಂದರು.

ಜ್ಞಾನದೇವರು "ನಾನು ಜ್ಞಾನದೇವನು ಎಂದರೆ ಸಕಲ ಆಗಮಗಳನ್ನು ಅರಿತವನು" ಎಂದರು.

ಸೋಪಾನದೇವರು "ಸರ್ವರನ್ನು ಭಗವಂತನ ಭಜನೆಯಲ್ಲಿ ಮಗ್ನರನ್ನು ಮಾಡುತ್ತಾ ಭಕ್ತರಿಗೆ ವೈಕುಂಠವನ್ನು ಪ್ರಾಪ್ತಿ ಮಾಡಿಸುವುದೇ ನನ್ನ ಕೆಲಸ" ಎಂದರು.

ಮುಕ್ತಾಬಾಯಿಯು "ನಾನು ಮುಕ್ತಿದ್ವಾರವನ್ನು ತೆರೆಯುವಳು" ಎಂದು ಹೇಳುವಳು

ಈ ಚಿಕ್ಕವಯಸ್ಸಿನಲ್ಲಿಯೇ ಈ ಮಕ್ಕಳಲ್ಲಿ ಬಾಯ ಬರುವಂತಹ ಬಹುದೊಡ್ಡ ಮಾತುಗಳನ್ನು ಕೇಳಿ ಎಲ್ಲರು ನಗುವರು. ಆ ಸಮಯದಲ್ಲಿ ಶುಭಾಮಂ

ಟಪದ ಹೊರಗೆ ಒಂದು ಎಮ್ಮೆಯು ಕಾಣಬಂದಿತು. ಅವರಲ್ಲಿ ಯಾವನೋ ಒಬ್ಬನು ಮಾತಿನಲ್ಲಿ ಏನಿದೆ ಅಗೋ ಹೋಗುವ ಎಮ್ಮೆಯನ್ನು ನೋಡಿ ಅದಕ್ಕು ಜ್ಞಾನದೇವರೆಂದು ಹೇಳಬಹುದೇ ಎನ್ನಲು; ಅನಂತರ ಜ್ಞಾನದೇವರು ಹೌದು ಸತ್ಯ ಅದಕ್ಕೂ ನನಗೂ ಯಾವಭೇದವು ಇಲ್ಲ. ಅದರಲ್ಲಿಯೂ ನನ್ನ ಆತ್ಮವೆ ಇದೆ ಎನ್ನಲು ಆ ವ್ಯಕ್ತಿ ಎಮ್ಮೆಯ ಬೆನ್ನಿನಮೇಲೆ ಮೂರು ಏಟನ್ನು ಹಾಕಿದನು. ಆಗ ಜ್ಞಾನದೇವರ ಸರ್ವಾತ್ಮಭಾವದ ನೀತಿಯಿಂದ ಜ್ಞಾನದೇವರ ಬೆನ್ನಿನಮೇಲೆ ರಕ್ತವು ಧಾರಾರೂಪವಾಗಿ ಹೊರತೊಡಗಿತು. ಮತ್ತೆ ಆ ಎಮ್ಮೆಯ ಬಾಯಿಂದ ವೇದಮಂತ್ರಗಳನ್ನು ಹೇಳಿಸಿ, ನಮಸ್ಕರಿಸಿ ಆ ಎಮ್ಮೆಯ ತಲೆ ಮೇಲೆ ತಮ್ಮ ಹಸ್ತವನ್ನು ಇಟ್ಟು ಹರಸಿದರು. ತಕ್ಷಣವೆ ಆ ಎಮ್ಮೆಯ ಬಾಯಿಂದ ಸ್ಪಷ್ಟವಾಗಿ ನಾಲ್ಕು ವೇದಗಳ ಮಂತ್ರಗಳು ಅಸ್ಖಲಿತವಾಗಿ ಹೊರಟವು. ಈ ರೀತಿ ವಿರಾಮವಿಲ್ಲದೆ ಎಮ್ಮೆಯ ಮುಖದಿಂದ ಘೋಷವಾಗುವುದನ್ನು ದೊಡ್ಡ ದೊಡ್ಡ ವೈದೀಕ ಬ್ರಾಹ್ಮಣರೆಲ್ಲರು ಕೇಳಿ ಆಶ್ಚರ್ಯಭರಿತರಾದರು ಅನಂತರ ಅವರೆಲ್ಲರು ಲಜ್ಜಿತರಾಗಿ ಈ ಬಾಲಯೋಗಿ, ಯಥಾರ್ಥವಾಗಿ ವಿಷ್ಣುವಿನ ಅವತಾರವೆಂದು ಪ್ರಶಂಸಿಸಿದರಂತೆ. ಆಗ ಜ್ಞಾನದೇವರಿಗೆ ೧೨ ವರುಷ ವಯಸ್ಸಾಗಿತ್ತು.

ಪೈಠಣದಲ್ಲಿ ಒಮ್ಮೆ ಒಬ್ಬ ಬ್ರಾಹ್ಮಣನು ಪಿತೃವಿನ ಶ್ರಾದ್ಧವನ್ನು ಮಾಡುತ್ತಿರಲು ಜ್ಞಾನದೇವರ ಆಜ್ಞೆಯಂತೆ ಪಿತೃದೇವತೆಗಳು ಬಂದು ತಮ್ಮ ತಮ್ಮ ಆಸನಗಳಲ್ಲಿ ಕುಳಿತರು. ಜ್ಞಾನದೇವರ ಯೋಗಶಕ್ತಿ ಮತ್ತು ಸಿದ್ಧಿಗೆ ಆ ಸರ್ವಬ್ರಾಹ್ಮಣರು ಆಶ್ಚರ್ಯಪಡುತ್ತಾ ಆತನಿಗೆ ದಾಸಾನುದಾಸರಾದರು.

ಈ ರೀತಿ ಜ್ಞಾನದೇವರು ಅನೇಕ ಅಲೌಕಿಕ ಶಕ್ತಿಯ ಪ್ರಭಾವವನ್ನು ಪೈಠಣ ಬ್ರಾಹ್ಮಣರೆಲ್ಲರೂ ನೋಡಿ ಇವರ ಮಹಾಮಹಿಮಗೆ ಒಳಗಾಗಿ ಇವರು ದೈವಸ್ವರೂಪರೆಂದೂ ಜೀವನ್ಮುಕ್ತರೆಂದೂ ಆದ್ದರಿಂದ ಇವರಿಗೆ ಪ್ರಾಯಶ್ಚಿತ್ತದ ಅವಶ್ಯಕತೆಯೇ ಇಲ್ಲವೆಂದು ಭಾವಿಸಿದರು.

ನಿವೃತ್ತಿನಾಥರು ಗಹಿನಿನಾಥರಿಂದ ಹೊಂದಿದ್ದ ಮಂತ್ರೋಪದೇಶವನ್ನೇ ಜ್ಞಾನದೇವರಿಗೆ ಉಪದೇಶಿಸಿದರು. ಈ ಸಾಂಪ್ರದಾಯವು ವಿಶೇಷತಃ ಯೋಗಮಾರ್ಗಕ್ಕೆ ಸಂಬಂಧಿಸಿರುತ್ತದೆ. ಆದರೆ ನಿವೃತ್ತಿನಾಥರು ತನ್ನ ಗುರುಗಳ ಆಜ್ಞಾನುಸಾರವಾಗಿ ಅವನ ಸಹೋದರ ಸಹೋದರಿಯರಿಗೆ ಕೃಷ್ಣ ಉಪಾಸನೆಯ ದೀಕ್ಷೆಯನ್ನು ಕೊಟ್ಟರು. ಅಲ್ಲಿಂದೀಚೆಗೆ ಮಹಾರಾಷ್ಟ್ರದೇಶದಲ್ಲಿ ಭಕ್ತಿಮಾರ್ಗವು ಪ್ರಚಾರ ಉಂಟಾಯಿತು. ಈ ಕಾರಣದಿಂದ ಭಕ್ತಿಮಾರ್ಗದ ಪ್ರಚಾರವು ನಡೆಯಲ್ಪಟ್ಟಿದ್ದಾದರೂ ಜ್ಞಾನೇಶ್ವರರು ಯೋಗಮಾರ್ಗವನ್ನು ಬಿಟ್ಟಿರಲಿಲ್ಲ. ಜ್ಞಾನದೇವರು ಭಗವತ್‌ಗೀತೆಯ ಆರನೆ ಅಧ್ಯಾಯದ ೧೨ ರಿಂದ ೧೬ ನೇ ಶ್ಲೋಕದವರೆವಿಗೆ ಬರೆದಿರುವ ವ್ಯಾಖ್ಯಾನವು ಯೋಗಸಾಧನಕ್ಕೆ ಸಂಬಂಧಿಸಿದೆ. ಶಂಕರಾಚಾರ್ಯರು ಈ ಶ್ಲೋಕಗಳಿಗೆ ಯೋಗಸಂಬಂಧದಲ್ಲಿ ಯಾವ ಯೋಗಾನುಭವದಿಂದ ಯಥೇಚ್ಛವಾಗಿ ವಿವರಿಸಿರುವರು. ಅದರಲ್ಲಿ ಕುಂಡಲಿನಿಯನ್ನು ಎಚ್ಚರಗೊಳಿಸುವ ಉಪಾಯವನ್ನು ಅದರಿಂದ ಉಂಟಾಗುವ ಸಿದ್ಧಿಗಳನ್ನು ವರ್ಣಿಸಿರುವರು. ಆದರೆ ಇವರು ಯೋಗಸಾಧನೆಗೆ ಯಾವ ಪ್ರಾಮುಖ್ಯವನ್ನು ಕೊಟ್ಟಿಲ್ಲ. ಆದರೆ ಕಷ್ಟಕರವಾದ ಯೋಗಮಾರ್ಗವನ್ನು ಅವಲಂಬಿಸುವುದಕ್ಕಿಂತ ಸುಗಮವಾದ ಭಕ್ತಿಮಾರ್ಗವು ಲೇಸೆಂದು ತಿಳಿಸಿರುವರು. ಗೀತೆಯಲ್ಲಿರುವ ತತ್ವಾರ್ಥವನ್ನು ಚೆನ್ನಾಗಿ ತಿಳಿದವರಿಗೆ ಮಾತ್ರ ಮುಕ್ತಿಯನ್ನು ಕೊಡುವುದು ಅಂತಲ್ಲ, ಅರ್ಥವನ್ನು ತಿಳಿಯದ ಓದಿದವರಿಗೂ, ಕೇಳತಕ್ಕವರಿಗೂ ಮುಕ್ತಿ ಭಾಗ್ಯವನ್ನು ಅನುಗ್ರಹಿಸುವುದು ಎಂದು ತಿಳಿಸಿದ್ದಾರೆ. ಜ್ಞಾನದೇವರು ತಮಗೆ ದೊಡ್ಡಣ್ಣನಾದ ನಿವೃತ್ತಿನಾಥರಿಂದ ದೀಕ್ಷೆಯನ್ನು ತೆಗೆದುಕೊಂಡರೆಂದು ಮೇಲೆಯೇ ಹೇಳಿದೆ. ಈ ದೀಕ್ಷೆಯನ್ನು ತೆಗೆದುಕೊಂಡ ಮೇಲೆ ಅಣ್ಣನನ್ನು ಗುರುಗಳೆಂತಲೂ, ಈಶ್ವರನೆಂತಲು ಭಾವಿಸುತ್ತಿದ್ದರು. ಸಾಧಾರಣವಾಗಿ ಇದುವರೆವಿಗೂ ಲೆಕ್ಕವಿಲ್ಲದಷ್ಟು ಗೀತೆಗೆ ವ್ಯಾಖ್ಯಾನಗಳಿವೆ. ಆದರೂ "ಶ್ರೀ ಜ್ಞಾನೇಶ್ವರಿ"ಗೆ ಸಮಾನವಾದ ವ್ಯಾಖ್ಯಾನಗಳು ಎಲ್ಲಿಯು ಇಲ್ಲ. ಪ್ರತಿಯೊಂದು ಸಾಂಪ್ರದಾಯವನ್ನು ತೊರೆದು ಗೀತೆಯ ಹೃದಯವನ್ನು ಚೆನ್ನಾಗಿ ತಿಳಿಸುವುದಕ್ಕೆ ಜ್ಞಾನದೇವರು ಪ್ರಯತ್ನಿಸಿರುವರು. ಈ ಜ್ಞಾನೇಶ್ವರಿ ಗ್ರಂಥವು ೭೦೦ ವರುಷಗಳ ಹಿಂದೆ ವಿರಚಿಸಲ್ಪಟ್ಟ ಗ್ರಂಥವಾಗಿದೆ. ಈ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟಿರುವ ವಿಷಯ ನಿರೂಪಣವು ವರ್ಣನಾತ್ಮಕರಿಯೂ ಓದುಗರನ್ನು ಮುಗ್ಧರನ್ನಾಗಿ ಮಾಡುವರೀತಿಯಲ್ಲಿ ವಿವರಿಸಲ್ಪಟ್ಟಿದೆ. ಪಾಠಕರು ಈ ಮಹಾಮಹಿಮೆಯ ದಿವ್ಯ ಚರಿತ್ರೆಯನ್ನು ಇವರ ಕೃಪಾನುವಾದ ಜ್ಞಾನೇಶ್ವರಿಯನ್ನು ಪಠಿಸಿ ಕೃತಾರ್ಥರಾಗಲೆಂದು ಪ್ರಾರ್ಥಿಸುವೆ.

* * * * *



(28 ನೇ ಪುಟದಿಂದ)

ಲಿಂಗ ಉಂಟು. ಬೇರೆ ಕಡೆಗಳಲ್ಲಿ ಸಹಿತ ಪಾಣಿಪಾಟಗಳು ಶಿಥಿಲವಸ್ಥೆ ನೋಡಲು ಸಿಗುತ್ತವೆ.

ವಿಜಯನಗರ ಸಾಮ್ರಾಜ್ಯ ಪತನದ ನಂತರ ಅನೇಕ ಗುಡಿಗಳು ನಾಶವಾದವು. ಆಗ ಪುಲಿವೆಂದಲಗ್ರಾಮ ಭಕ್ತಾದಿಗಳು ಮುಂಜಾಗ್ರತೆ ವಹಿಸಿ ಈ ಗುಡಿಯನ್ನು ಮಣ್ಣು ಹಾಕಿ ಮುಚ್ಚಿ ಬಿಟ್ಟಿದ್ದರೆ ಇತ್ತೀಚೆಗೆ ಅಂದರೆ ೧೯೭೦ ರಲ್ಲಿ ಪುಲಿವೆಂದಲ ಪುರೋಹಿತರಾದ ಶ್ರೀ ಗೋಪಿನಾಥ ಶರ್ಮ ಇವರು ಈ ಗುಡಿಯನ್ನು ಗುರುತಿಸಿ ಶುದ್ಧೀಕರಣ ಗೊಳಿಸಿದರಲ್ಲದೆ ಜೀರ್ಣೋದ್ಧಾರ ಮಾಡಿದ್ದಾರೆ. ಈಗ ಅಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ಭವ್ಯವಾಗಿ ನಡೆಯುತ್ತಿವೆ.

ಆದಕಾರಣ ಈ ಶೋಧನಾ ಕಾರ್ಯಕ್ರಮದಲ್ಲಿ ನೀವೂ ಸಹಿತ ಭಾಗವಹಿಸಿ, ವ್ಯಾ.ಪ್ರ. ಪ್ರಾಣದೇವರ ತಾಣ ತಿಳಿಸಿರಿ. ವ್ಯಾಸಪ್ರತಿಷ್ಠಿತ ಪ್ರಾಣದೇವರ ಲಕ್ಷಣ ತಾತ್ಪರ್ಯ ತಿಳಿಯಬೇಕಾಗಿದೆ. ಜಾಗೃತ ದೇವರಲ್ಲಿ ಏನು ವೈಶಿಷ್ಟತೆ ಇರುತ್ತದೆ? ಇದನ್ನು ಪಂಡಿತರು ತಿಳಿಸಬೇಕೆಂದು ವಿನಂತಿ.

---

ಈ ಲೇಖನ ಬರೆಯಲು ಸಹಕಾರ ನೀಡಿದ ಶ್ರೀ ಎನ್.ಕೆ. ಇನಾಮತಿ, ಹುಬ್ಬಳ್ಳಿ, ಶ್ರೀ ಬೀಳಗಿದಾಸರು ಹುಬ್ಬಳ್ಳಿ, ಶ್ರೀ ಗೋಪಿನಾಥ ಶರ್ಮ ಪುಲಿವೆಂದಲ, ಶ್ರೀ ಶಂಕರಶಾಸ್ತ್ರಿ ಆಲಂಪೂರ, ಶ್ರೀ ಬಿಂದಾಚಾರ್ಯ ಪುರಾಣಿಕ್ ಯಾದಗಿರಿ, ಶ್ರೀ ನಾರಾಯಣಾಚಾರ್ಯ ಹನುಮಸಾಗರ ಶ್ರೀ ಹೆಚ್.ಜಿ. ಸಾನಬಾಳ್ ರಾಯಚೂರು ಮತ್ತು ದಾಸಸಾಹಿತ್ಯ ಪ್ರಾಜೆಕ್ಟ ಅಧಿಕಾರಿ ಶ್ರೀ ಅಪ್ಪಣ್ಣಾಚಾರ್ಯ ತಿರುಪತಿ, ಇನ್ನೂ ಹಲವಾರು ಪಂಡಿತರು ಗೆಳೆಯಂದರಿಗೂ ನನ್ನ ವಂದನೆಗಳು. ಶೋಧನಾಕಾರ್ಯ ಮುಂದುವರೆದಿದೆಯಾದ ಕಾರಣ ಇನ್ನು ಮುಂದೆ ಮಾಹಿತಿ ಒದಗಿಸುವವರಿಗೂ ಮುಂಗಳ ಧನ್ಯವಾದಗಳೊಂದಿಗೆ ದುರ್ಗಜಗದೀಶ ೭--೧--೭೦ ಗಾಜಗಾರ ಪೇಟೆ ರಾಯಚೂರು -- ೫೮೪೧೦೧ ಇವರಿಗೆ ಬರೆಯಬೇಕೆಂದು ಸವಿನಯ ಸೂಚನೆ. ♣



ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸದೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ವೇಮನ ಕಾವ್ಯ

---ಶಿವಕವಿ ಎನ್. ಶಿವಗೌಡ.

ಆಂಧ್ರ ವೇಮನಕೃತಿ, ಹರ್ಷದಾಂಗ್ಲೇಯನು
ಆಂಗ್ಲ ಭಾಷೆಯಲ್ಲಿ ಅನುವದಿಸಿದ
ಕನ್ನಡಿಗನು ನಾನು ಕನ್ನಡದನುವಾದ
ಮಾಡಲಿಚ್ಛಿಸಿದೆನು ಮಮತೆಯಿಂದ

ಇತರ ಖಂಡದವರು ಎಷ್ಟೊ ಮನ್ನಣೆ ನೀಡಿ
ತೆಲುಗಿನ ತಿಳಿತನವ ತಿಳಿದರೆಂದೊ
ಅಕ್ಕಪಕ್ಕ ಕವನವಂದವರಿತ ನಾನು
ಮಾಡಲಿಚ್ಛಿಸಿದೆನು ಮಮತೆಯಿಂದ

ಅನ್ಯದೇಶದವರು ಆಂಧ್ರ ವೇಮನ ಯೋಗಿ
ಆತ್ಮರೂಪಿಯೆಂದು ಅರ್ಚಿಸಿದರು
ಆಂಧ್ರ ಕವಿತೆ ಬಲ್ಲ ಅಲ್ಪನು ನಾ ಸೇವೆ
ಮಾಡಲಿಚ್ಛಿಸಿದೆನು ಮಮತೆಯಿಂದ

ನಿಖರ ನೀತಿ ತತ್ವ ಸುಕರ ಪದ್ಧತಿಯಲ್ಲಿ
ಪ್ರಜೆಗೆ ತಿಳಿಸಬಂದ ಪರಮ ಯೋಗಿ
ಬಣ್ಣಿಸಲಳವಲ್ಲ ಅಣ್ಣ ವೇಮಣ್ಣನ
ಆ ಮಹರ್ಷಿಕೃತಿಯನನುವದಿಸುವೆ

ತೆನುಗು ಭಾಷೆ ಗುರುವು ತಿದ್ದಿಸಿ ಕಲಿಸಿದ್ದು
ಕನ್ನಡ ಮನೆಭಾಷೆ ಎನ್ನಭಾಷೆ
ಮಲಯಜ ಸಮ ನನ್ನ ಮಾತೃಭಾಷೆಯರಿತೆ
ತೆಲುಗಿನ ತಿಳಿತನವ ನೊಲಿದುತಿಳಿವೆ

ಆಟ ವೆಲದಿ ಕವನ ಕಂದವನ್ನು ತರಲು
ಭಾವ್ಯವೆಂದು ಶ್ರವಣ ಶ್ರಾವ್ಯವೆಂದು
ಸಣ್ಣನುಡಿಗಳಿಂದ ದೆಣ್ಣೆಯಂತಹ ನೀತಿ
ಜನಕೆ ಸಾರಿ ನುಡಿದ ಚತುರ ವೇಮ

* * * * *

## ಮೂರ್ಖಪದ್ಧತಿ

ಮರವಡೊಂಕುತಿದ್ದಿ ಸರಿಮಾಡಲು ಬಹುದು
ಕಲ್ಲಡೊಂಕುತಿದ್ದಿ ಕಡೆಯಬಹುದು
ಮನವ ಡೊಂಕುತಿದ್ದೆ ಘನತೆಯಾರಿಗು ಇಲ್ಲ
ವಿಶ್ವಪ್ರೇಮಿ ತಿಳಿಯೊ ವಿಮಲ ವೇಮ

ಮಾತು ಮಾತಿನಲ್ಲೆ ಮಾರ್ಪಡಿಸುವ ಮೂರ್ಖ
ಸಮತೆಯಿಲ್ಲ ನಿಯಮ ಪ್ರಮತಿಯಿಲ್ಲ
ನೀರಿನಲ್ಲಿ ಬರಹ ನಿಲ್ಲದದರಂತೆ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಮೃಗವು ಮೃಗವು ಎಂದು ಮೃಗನಿಂದೆಯೇತಕೆ
ಮೃಗಕಿಂತಲು ಮೂರ್ಖ ಮಿಗೆಕೆಡುಗು
ಮೃಗವು ಮೂರ್ಖನಿಂದ ಮಿಗಿಲಾಗು ಗುಣದಲ್ಲಿ
ವಿಶ್ವಪ್ರೇಮಿ ತಿಳಿಯೊ ವಿಮಲ ವೇಮ

ವನದಿ ವಾಸವಿದ್ದ ಪರಮ ಮೌನೀಂದ್ರರು
ಮನವ ನಿಲಿಸ ಬರದೆ ಮಮತೆ ಬಿಡದೆ
ಕೆಡುವರೆಂದ ಮೇಲೆ ಕೆಡದಿರ್ಪನೇ ಮೂರ್ಖ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಶಿವನ ಮಂತ್ರವೆ ಭುವಿಲಿ ಶ್ರೀ ವಿಷ್ಣು ಮಂತ್ರವು
ಅರಿತು ಅರಿಯದಿರುವ ಹರಟೆ ಜನರು
ಹರಿಹರರಿಗೆ ಭೇದ ಹರಡಿಕಾಣುತಿಹರು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಸಾಧು ಶೀಲೆಯರಿಗು ಸತ್ಯವರ್ತನವನು
ಜಾರೆ ಯರಿವಳೇನು ಜಗತಿಯಲ್ಲಿ
ಪರಮನ ನರಿವಜ್ಞಾನಿ ಪ್ರಾಕೃತನರಿವನೇ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಹಾವಿಗಿಂತಲು ಪಾಪಿ ಹಾಳು ಪ್ರಾಣಿಯೆ ಇಲ್ಲ
ಅಂತ ಹಾವು ಹೇಳಿದಂತೆ ಕೇಳ್ವ



ಖಳನ ಮಾರ್ಪಡಿಸಲು ಘನರಾರು ಇಳೆಯಲ್ಲಿ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

## ದಾಂಭಿಕ ಪದ್ಧತಿ

ಕಳ್ಳ ಮಂತ್ರದಿಂದ ಕೈವಲ್ಯ ದೊರೆವುದೇ
ನಡೆವುದಿಲ್ಲ ಸುಳ್ಳ ನಡತೆಯೆಂದು
ಗುರುವು ಅಲ್ಲದವನ ಗುರುವೆನ್ನಲದು ಮೋಸ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಕಾವಿಯನು ಹೊದ್ದು ಘನ ಯೋಗಿಯಂತಿದ್ದು
ಆಶೆ ಬಿಟ್ಟ ಕೃತಕವನ್ನು ತೋರಿ
ತಿರುಗುವವನೆ ಕಳ್ಳದೃಷ್ಟಿಯ ಸನ್ಯಾಸಿ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಕೇಳಿದ ನುಡಿ ಕೆಲವು ಕೇಳದವು ಕೆಲವು
ಚಕಿತ ಸುದ್ದಿ ಕೆಲವು ಸಾರಿಹೇಳ್ವ
ತಾನು ಕಂಡೆನೆಂದು ದಾಂಭಿಕನಾದವ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಘಟವ ನಿಂದ್ರಿಯಗಳ ಕಟ್ಟದೆ ತಾಬಿಟ್ಟು
ಸಾವು ಬರುವ ಮುನ್ನ ಸನ್ಯಸಿದರೆ
ಆತ್ಮಶುದ್ಧಿಯಿಲ್ಲ ದಾಗದು ಮೋಕ್ಷವು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಜಡಗಳನು ಕಟ್ಟಿ ಸನ್ಯಸಿಸುವುದೇಕೆ
ಒಡಲು ಮುರಿಯುವಂತೆ ಯೋಗವೇಕೆ
ಸುಲಭ ಮುಕ್ತಿ ಮಾರ್ಗ ಸುಳಿವ ತಿಳಿದೇಕು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಡಂಭ ಪಾಪಿ ಜನರ ನೀ ನಂಬಲು ಬೇಡ
ಮೋಸ ಮಾಳ್ಪರು ನಿಜ! ದೋಷ ವೆನದೆ
ಕಾಡು ಮೃಗಗಳವರು ಕರುಣೆಯೆಳ್ಳಷ್ಟಿಲ್ಲ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

## ವಿದ್ವತ್ ಪದ್ಧತಿ

ತಪ್ಪ ಒಪ್ಪ ತಿಳಿದು ದೈವಸಂಕೀರ್ತನೆ
ಮಾಡುವವರೆ ಹರಿಯ ಮಮತೆ ಜನರು
ನೀತಿ ಅರಿಯದಂತೆ ನಿಂದೆ ಮಾಡಲು ಬೇಡ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ವೇಮನ ತೆಲುಗು ದೇಶದಲ್ಲಿ ಹುಟ್ಟಿದ ನಾಡಕವಿ. 15 ನೇ ಶತಕದಲ್ಲಿ ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಬೆಳೆದ ಆತ ನಡು ವಯಸ್ಸಿನಲ್ಲಿ ಸರ್ವವನ್ನೂ ತ್ಯಾಗಮಾಡಿ ವಿರಕ್ತನಾದ. ತನ್ನ ಸುತ್ತಲ ಜಗತ್ತನ್ನು ಅವರಲ್ಲಿನ ಲೋಪ ದೋಷಗಳನ್ನು ಕುರಿತು, ಸಮಾಜ ನಡೆಯಬೇಕಾದ ಆದರ್ಶದ ದಾರಿಯನ್ನು ಕುರಿತು ಕಿರಿದಾದ ಪದ್ಯಗಳಲ್ಲಿ ಸರಳವಾಗಿ ತಿಳಿಯ ಹೇಳಿದ. ಆತ ಆಗಾಗ ಘಾಟಾಗಿ, ಹೇಳಿರಬಹುದು ಆದರೆ ಅಲ್ಲಿನ ಒಳ ಸತ್ವವನ್ನು ಕುರಿತು ಯೋಚಿಸಬೇಕಾಗುತ್ತದೆ. ಕನ್ನಡದಲ್ಲಿ ವೇಮನನ ಹಲವು ಪದ್ಯಗಳನ್ನಿಲ್ಲಿ ಪ್ರಸ್ತುತಪಡಿಸಲಾಗಿದೆ.

ತಾನು ನಾನು ಎನುವ ತತ್ವ ಭೇದವನ್ನು
ಮೂರಗೈದು ಜ್ಞಾನ ಮಹಿಮೆಯಿಂದ
ಮೌನವಿದ್ದಯೋಗಿ ಮಹಿಯುಲುತ್ತಮೋತ್ತಮ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ದೇಹ ಗುಣಗಳೆಲ್ಲ ತಿಳಿದಂತ ಶಿವಯೋಗಿ
ಮೋಹ ಗುಣಕೆ ಸಿಕ್ಕಿ ಮೋಸಹೋಗ
ಇಂದ್ರಜಾಲಕನವನೇಕೆ ತಾ ಸಿಗುವನು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ದೇವ ಪೂಜೆಗಳಿಂದ ದಿವ್ಯ ಭೋಗಗಳಲ್ಲಿ
ತತ್ವ ಪರಿತ ನರನು ದೈವಸಮನು
ಏನು ಇಲ್ಲದವಗೆ ಏನುಗತಿಯು ಇಲ್ಲ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಪರುಸ ಸೋಂಕಿ ಲೋಹ ಬಂಗಾರ ವಾದಂತೆ
ಆರತಿಯಲಿ ಕರ್ಪೂರವಡಗಿದಂತೆ
ಬಂಧ ಮುಕ್ತಿ ಮಾಡಳ್ವ ಪರಮಾತ್ಮಜೀವಿಗೆ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಬೇಕು ಎನಲು ಬರದು ಸಾಕೆನೆ ಹೋಗದು
ಪೂರ್ವ ಪಾಪಕರ್ಮ ಭೋಗಫಲವು
ಮನಸಿನಲ್ಲಿ ಚಿಂತೆ ಮಾಡದಿರೆ ಲೇಸು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಮನ ಪುನೀತವಾಗಿ ಮಾಡಿದ ಪುಣ್ಯವು
ಅಲ್ಪವಾಗಿರಲದು ಸ್ವಲ್ಪವಲ್ಲ
ಆಲದಮರವೆಷ್ಟು ಅದಕೆ ಬೀಜವದೆಷ್ಟು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

## ಅರ್ಥಪದ್ಧತಿ

ಧರಣಿಯಲ್ಲಿ ಸುಖವು ಧನವಿಲ್ಲದಲೆ ಇಲ್ಲ
ಅರಿವಿನ ಧನವಿರದೆ ಪರವಲಿಲ್ಲ
ಅರಿವು, ಧನವು, ಇರದೆ ಎರಡಲಿ ಸುಖವಿಲ್ಲ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ನಿಕ್ಕ ಜಾತಿಹೀನ ರೊಕ್ಕದಿಂ ಶೋಭಿಪ
ಸಿರಿಯು ಇರದೆ ಕುಲಕೆ ಹಿರಿಮೆ ಇಲ್ಲ
ಹಿರಿಯ ಜಾತಿಗಿಂತ ಸಿರಿಯ ಜಾತಿಯೆ ಲೇಸು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ನೋಡಿ ನೋಡಲಾರ ನುಡಿಯ ಬಾಯ್ಬಿಟ್ಟು
ಕೇಳಿ ಕೇಳಲಾರ ಕೃತಕ ತೋರಿ
ಚೆನ್ನ ಧನಿಕಗಿರುವ ಸನ್ನಿ ಪಾತವಿದು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಪ್ರಾಪ್ತಿ ಯಿದ್ದ ಸ್ಥಳದಿ ಫಲವಿಕ್ಕುತಾ ದೈವ
ಪ್ರಾಪ್ತಿಯಿರದ ಸ್ಥಳದಿ ಫಲವಲ್ಲ
ಪ್ರಾಪ್ತಿಯಿರದೆ ಸ್ವರ್ಗ ಪರಮಾತ್ಮಕೊಡುವನೇ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಪೂರ್ವ ಜನ್ಮದಲ್ಲಿ ಪುಣ್ಯವ ಮಾಡದ
ಪಾಪಿಯು ಹಣಕಾಶೆಪಡುವುದೆಲ್ಲ
ಬಿತ್ತುವುದನು ಮರೆತು ಬೆಳೆಕೊಯ್ಯ ಲೋದಂತೆ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಬಡತನದಲಿ ನೋಡು ಬಂಧುಜನ ಗುಣ
ಭಯದ ವೇಳೆ ನೋಡು ಬಂಟನ ಗುಣ
ಕಾಸು ಇಲ್ಲದಾಗ ಕಾಣು ಹೆಂಡತಿ ಗುಣ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಬಡತನವದು ಕಿಚ್ಚು, ಸುಡುವ ಕಾಡಿನ ಕಿಚ್ಚು
ತನ್ನವರ ಕೆಡಿಸುಗು ತನ್ನಕೆಡಿಸುಗು
ಮನದಿ ಬಡತನವನು ನೆನೆವುದೇ ಪಾಪವು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

## ದುರ್ಜನ ಪದ್ಧತಿ

ಕುಲದಡಿಯಲಿ ಒಬ್ಬ ಗುಣಹೀನ ನಿದ್ದೊಡೆ
ಕುಲವು ಕೆಡುವದವನ ಗುಣಗಳಿಂದ
ಕಬ್ಬಿನ ತುದಿ ತೆನೆಯು ಕಾಣಿಸಿಕೊಂಡಂತೆ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ದುರುಳ ಮರಣಿಸಲು ಕಂಡವರೆಲ್ಲರು
ಇಣಕಿ ನೋಡುವುದಷ್ಟೆ ಇರದು ದುಃಖ
ತೋಳ ಸತ್ತರೆ, ಕರು, ತೋರುವದೇ ದುಃಖ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಖುಲ್ಲ ಬುದ್ಧಿಯವನ ಕೂಡಿ ಮಾತಾಡಲು
ಮರ್ಮ ತಿಳಿಸಲು ಮನ ಮಾಡದೇಡ
ಚೂರರಿತರೆ ಅವ ಸಾರುವನೂರೆಲ್ಲ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಗಂಡ ಶಿಲೆಯ ನೊಡೆದು ತುಂಡು ಮಾಡಬಹುದು
ಪರ್ವತಗಳ ಹಿಟ್ಟು ಬಡಿಯಬಹುದು
ಕಠಿಣ ಬುದ್ಧಿ ಮನಸು ಕರಗಿಸಲಳವಲ್ಲ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಗುಹೆಗಳಲ್ಲೆ ಇರಲಿ ಗುಡಿಗಳಲ್ಲೆ ಇರಲಿ
ಮೊತ್ತ ಬೂದಿಯನ್ನೆ ಮೆತ್ತಿಯಿರಲಿ
ದುಷ್ಟಬುದ್ಧಿಯರಿಗೆ ದುಡುಕು ಪೋಗುವುದುಂಟೆ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಚಲಿಸಿ ಚಲಿಸದಂತೆ ಸಾಗುವವಾ ಗಂಗೆ
ಹೊಯ್ಲಿನಿಂ, ಹರಿವುದು ಹೊಲಸುಹಳ್ಳ
ಅಧಿಕನ ಸಹನತ್ವ ಅಧಮಂಗೆ ಬಾರದು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ತನಗೆ ಅನ್ನವಿಟ್ಟು ತನ್ನ ಸಂರಕ್ಷಣೆ
ಮಾಡುವವನ ನಾಯಿ ಮರೆವುದಿಲ್ಲ
ಮೇಲು ಮರೆಯುವ, ಖಳ, ಮೃಗದಂಶಕೂ ಕೀಳು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

## ಸಜ್ಜನ ಪದ್ಧತಿ

ಅನ್ಯರಿಗೆ ಒದಗಿದ ಆಪತ್ತು ತನದೆಂದು
ಹೊತ್ತವ ಭುವಿಯಲ್ಲಿ ಯುತ್ತಮ ಸರಿ
ದಯೆ ಯಿರುವ ಮನುಜನು ದೈವಸಮಾನು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಅನ್ಯಸ್ತ್ರೀಯರನ್ನು ಅನ್ಯರ ಹಣವನ್ನು
ಆಶೆ ಮಾಡದೆ ಹಿತಕಾರಿಯಾಗಿ
ಅನ್ಯರಾರ್ತಿ ಕಳೆವ ನಾದವನೇ ಪ್ರಾಜ್ಞ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಅನ್ಯಕಾಂತೆಯರಿಗೆ ಅಣ್ಣನಾಗಿರಬೇಕು
ಪರಧನ ವಿಷವೆಂದು ಅರಿಯಬೇಕು
ಪರರು ಕೋಪಿಸಿದರೆ ಇರಬೇಕು ಶಾಂತವು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಅತಿಹಿತಕರವಾಗಿ ಆಡಿದ ಮಾತಿಗೆ
ಸಂತಸಪಡುವವರು ಸಾಧು ಜನರು
ಅಧಿಕ ಮಾತನಾಡಿ ಆಯಾಸ ಪಡಲೇಕೆ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಅಮಲವಾದ ನುಡಿಯೆ ಅಭಿಷೇಕ ಜಲವಾಗಿ
ದೇಹವೆ ಗುಡಿಯಾಗಿ ಮೋಹಕಳೆದು
ಆತ್ಮದಿ ಶಿವನಿರಿಸಿದಾತನೇ ಶಿವಯೋಗಿ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಆತ್ಮದಲ್ಲಿ ಶಿವನ ಅನುದಿನ ಕಾಣುತ್ತ
ಅವನ ಮಹಿಮೆಯಿಂದ ಹರುಷಹೊಂದಿ
ದಾತ ಸಾಧುವಪ್ಪ ಧಾತ್ರೀ ವಲಯದಲಿ
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ

ಇದ್ದ ವಾಸದಲ್ಲೆ ಇಹ ಪರಂಗಳರಿತು
ದೀನ ವೃತ್ತಿಯಿಂದ ತಿರುಗುತಿದ್ದು
ಭಕ್ತಿ ಕೂಡಿ ನಡೆದ ಪ್ರಾಜ್ಞರೇ ಸಂತರು
ವಿಶ್ವ ಪ್ರೇಮಿ ತಿಳಿಯೊ ವಿಮಲ ವೇಮ



# ಭೀಮನ ಸಂತೋಷ

---ಸಂತ ಹರಿಹರಾನಂದ ಸರಸ್ವತೀ.

ಒಮ್ಮೆ ದೂರ್ವಾಸರು ಬಹಳ ಅಪರೂಪಕ್ಕೆ ಹಸ್ತಿನಾನಗರಕ್ಕೆ ಬಂದು ಧರ್ಮರಾಯನೊಂದಿಗೆ ರಹಸ್ಯವಾಗಿ ತಾವು ಮಾತನಾಡಬೇಕೆಂದೂ, ಪರಸ್ಪರ ಮಾತನಾಡುವಾಗ, ಆ ಸಮಯದಲ್ಲಿ ಮಂತ್ರಾಲಯದೊಳಗೆ ಬೇರೆಯಾರಿಗೂ ಪ್ರವೇಶವಿರಕೂಡದೆಂದೂ ಹಾಗೆ ಆದೇಶಿಸುವಂತೆ ಧರ್ಮಪ್ರಭುವಿಗೆ ಆಜ್ಞಾಪಿಸಿದರು. ಅವರ ಅಪ್ಪಣೆಯಂತೆ, ಯುಧಿಷ್ಠಿರನು ತನ್ನ ತಮ್ಮ ಭೀಮಸೇನನನ್ನು ಕರೆದು ತನ್ನಾಜ್ಞೆಯನ್ನು ತಿಳಿಸಿ, 'ಮಂತ್ರಾಗಾರದ ಹೊರಗೆ ಪಹರೆಕಾಯುತ್ತಿರು. ಯಾರನ್ನೂ ಒಳಗೆ ಬಿಡಬೇಡ. ನಾನು ಅತಿರಹಸ್ಯಮಾತಕತೆಯಲ್ಲಿ ತೊಡಗಿರುತ್ತೇನೆ. ಹಾಗೆ ನನ್ನ ಮಾತು ಮೀರಿ ಯಾರನ್ನೇ ಆಗಲಿ ಒಳಗೆ ಬಿಟ್ಟಲ್ಲಿ ನಿನ್ನ ಮೇಲೆ ಕಠಿಣ ಕ್ರಮ ತೆಗೆದುಕೊಳ್ಳುತ್ತೇನೆ' ಎಂದು ಎಚ್ಚರಿಸಿ ಮಾತಿಗೆ ಕುಳಿತ. ತನ್ನ ಅಗ್ರಜನ ಆದೇಶದಂತೆ ಗಸ್ತುತಿರುಗುತ್ತ ತನ್ನ ಕರ್ತವ್ಯ ನಿರ್ವಹಿಸುತ್ತಿದ್ದಾನೆ ಭೀಮಸೇನ. ಕೆಲಸಮಯದ ನಂತರ -- ಓರ್ವ ವಯೋವೃದ್ಧ ಬ್ರಾಹ್ಮಣನು ಹಸ್ತಿನಪುರವನ್ನು ಪ್ರವೇಶಿಸಿ -- ಮಂತ್ರಾಲಯದ ಒಳಹೋಗುವ ಸನ್ನಾಹದಲ್ಲಿರುವಾಗ ಭೀಮಸೇನನು ಆ ಮುದಕನನ್ನು ತಡೆದು ನಿಲ್ಲಿ "ಸ್ವಾಮಿ, ಅಷ್ಟು ತರಾತುರಿಯಲ್ಲಿ ಎಲ್ಲಿಗೆ ಹೋಗುತ್ತಿರುವಿರಿ? ಭೀಮ ಕಾಯದ. ನಾನು ಗಸ್ತುತಿರುಗುತ್ತಿರುವಾಗ ನನ್ನನ್ನು ಗಮನಿಸದೇ ತಾವು ಒಳನುಗ್ಗುತ್ತಿರುವಿರಲ್ಲಾ ಏನುಸಮಾಚಾರ? ಅಷ್ಟೇಕೆ ಅವಸರ? ಅದೇನು ಮಂತ್ರಾಲಯದ ಕಡೆ ಧಾವಿಸುತ್ತಿರುವಿರಿ? ಅಲ್ಲೇನು ಕಾರ್ಯ?" ಎಂದು ಪ್ರಶ್ನಿಸಿದ. "ಅಯ್ಯಾ ಭೀಮಸೇನ ನಾನು ಅತಿತ್ವರಿತವಾಗಿ ಧರ್ಮಪ್ರಭುಗಳನ್ನು ಭೇಟಿ ಮಾಡಬೇಕಾಗಿದೆ. ಆದ್ದರಿಂದ ದಯಮಾಡಿ ನನ್ನನ್ನು ತಡೆಯಬೇಡ. ಬಿಟ್ಟು ಬಿಡು" ಎಂದರು ವೃದ್ಧ ವಿಪ್ರರು. "ಖಂಡಿತ ಸಾಧ್ಯವಿಲ್ಲ ಸ್ವಾಮಿ, ನಮ್ಮ ಅಗ್ರಜರಾದ ಧರ್ಮಪ್ರಭುಗಳು ದೂರ್ವಾಸರೊಡನೆ ರಹಸ್ಯಮಾತುಕತೆಯಾಡುತ್ತಿದ್ದಾರೆ. ಯಾರನ್ನೂ ಒಳಗೆ ಬಿಡಬಾರದೆಂದು ಪ್ರಭುಗಳ ಅಪ್ಪಣೆಯಾಗಿದೆ. ಆದ್ದರಿಂದ ತಾವು ಬಂದದಾರಿಗೆ ಸುಂಕವಿಲ್ಲವೆಂದು ಹಿಂತಿರುಗುವುದು ಲೇಸು" ಎಂದ ವೃಕೋದರ. "ಹಾಗೆ ಹೇಳಬೇಡಪ್ಪಾ, ನಾನೋ ವಯಸ್ಸಾದವನು. ಈ ಸಮಯ ಬಿಟ್ಟರೆ ನನಗೆ ಮತ್ತೆ ಬರಲಾಗುತ್ತದೆಯೋ ಇಲ್ಲವೋ? ಇಂದೋ ನಾಳೆಯೋ ದಿನಗಳನ್ನು ಕಾಯುತ್ತಿರುವ ನನಗೆ ದಿನಗಳೇನು ಶಾಶ್ವತವೇ? ಅಥವಾ ಪ್ರಾಯ ಬರುತ್ತದೆಯೇ? ನೋಡು ಭೀಮಸೇನ -- ನನ್ನ ಮಾತುಕೇಳು. ಈ ಮುದುಕನ ಮೇಲೆ ಇಷ್ಟುಕೋಪವೇಕೆ? ತಾಪವೇಕೆ" ಎಂದರು ವಿಪ್ರರು. ತರುವಾಯ ಭೀಮರಾಯನು ಅವರ ಮೇಲೆ ಕನಿಕರಿಸಿ, "ಸ್ವಾಮಿ, ಆಗಲಿ, ತಮ್ಮನ್ನು ನಾನು ಮಂತ್ರಾಲಯದ ಒಳಗೆ ಬಿಡುವ ಮೊದಲು ತಾವು ಯಾವ ಉದ್ದೇಶಕ್ಕಾಗಿ ಧರ್ಮಪ್ರಭುಗಳನ್ನು ಕಾಣಬೇಕೆಂದಿರುವಿರಿ? ಅದನ್ನು ತಿಳಿಸಿದರೆ ಮಾತ್ರ ತಮ್ಮನ್ನು ಬಿಡುತ್ತೇನೆ" ಎಂದು ಪ್ರಶ್ನಿಸಿದ. "ಹೇಳುತ್ತೇನಪ್ಪಾ ಹೇಳುತ್ತೇನೆ ಕೇಳು. ಈ ಇಳಿ ಯಸ್ಸಿನಲ್ಲಿಯೂ ನನ್ನನ್ನು ಒಂದು ಪ್ರಬಲವಾದ ಚಿಂತೆ ಕಾಡುತ್ತಿದೆ. ನನಗೆ ಓರ್ವ ಪುತ್ರಿ ಇದ್ದಾಳೆ. ಅವಳಿಗೆ ವಿವಾಹ ಮಾಡಬೇಕಾಗಿದೆ. ಆದರೆ ನಾನು ಕಡು ಬಡವ. ನನ್ನಲ್ಲಿ ಬಿಡಿಗಾಸೂ, ಕುರುಡು ಕವಡೆಯೂ ಇಲ್ಲ. ನಾನು ಮೃತ್ಯುವನ್ನು ಅಪ್ಪುವುದರೊಳಗಾಗಿ ಮಗಳ ತಲೆಯ ಮೇಲೆ ನಾಲ್ಕು ಅಕ್ಷತೆ ಹಾಕಿ ನನ್ನ ಹೊಣೆಯನ್ನು ಇಳಿಸಿಕೊಳ್ಳೋಣವೆಂದು ತವಕಿಸುತ್ತ ಅದಕ್ಕಾಗಿ ಧರ್ಮಪ್ರಭುಗಳನ್ನು ಆರ್ಥಿಕ ಸಹಾಯವನ್ನು ಕೇಳೋಣವೆಂದು ಬರುತ್ತಿದ್ದೇನೆ" ಎಂದರು. ಆ ವಿಪ್ರರ ಕರುಣಾಜನಕ ಕಥೆಯನ್ನು ಕೇಳಿದ ಕೌಂತೇಯನು "ಸ್ವಾಮಿ ತಮ್ಮನ್ನು ಇನ್ನು ನಾನು ತಡೆಯುವುದಿಲ್ಲ. ಆದರೆ ಒಂದು ಮಾತು ತಮ್ಮ ಈ ಕೋರಿಕೆಗೆ ಧರ್ಮಪ್ರಭುಗಳು ಏನು ಅಭಿಪ್ರಾಯ ಹೇಳುತ್ತಾರೆನ್ನುವುದನ್ನು ತಾವು ನನಗೆ ತಪ್ಪದೇ ಹೇಳುತ್ತೇನೆಂದು ಮಾತು ಕೊಟ್ಟರೆ ಮಾತ್ರ ನಿಸ್ಸಂದೇಹವಾಗಿಯೂ ಮಂತ್ರಾಲಯ ಪ್ರವೇಶಕ್ಕೆ ಅವಕಾಶ ನೀಡುತ್ತೇನೆ" ಎಂದ. ಅವಶ್ಯವಾಗಿ ಹೇಳುತ್ತೇನೆ ಎಂದ ವಿಪ್ರರು ಸರಸರನೆ ನಡೆದು ಮಂತ್ರಾಲಯವನ್ನು ಪ್ರವೇಶಿಸಿದರು. ಧರ್ಮಪ್ರಭುವು ಆ ವಿಪ್ರರನ್ನು ಕುರಿತು ಅತ್ಯಾಶ್ಚರ್ಯದಿಂದ "ಸ್ವಾಮಿ ತಾವು ಯಾರು? ತಮ್ಮನ್ನು ಒಳಗೆ ಬಿಟ್ಟವರು ಯಾರು? ಹೊರಗೆ ಯಾರೂ ಇರಲಿಲ್ಲವೇ?" ಮೊದಲಾಗಿ ಪ್ರಶ್ನಿಸಿದ. ಅಪ್ಪಾ ಧರ್ಮರಾಯಾ -- ನಾನು ಓರ್ವವೃದ್ಧವಿಪ್ರ. ಒಂದು ತುರ್ತು ಕೆಲಸದ ಮೇಲೆ ನಿನ್ನನ್ನು ಕಾಣಲು ಬಂದಿದ್ದೇನೆ. (ಎಂದರು) ಹೊರಗೆ ಗಸ್ತು ತಿರುಗುತ್ತಿದ್ದ ಭೀಮಸೇನನ ಅನುಮತಿ ಪಡೆದೇ ನಿನ್ನೆದುರು ಬಂದಿದ್ದೇನೆ ಎಂದು ತಾವು ಬಂದ ಉದ್ದಿಶ್ಯವನ್ನು ಸಾದ್ಯಂತವಾಗಿ ಧರ್ಮರಾಯನಿಗೆ ತಿಳಿಸಿ, ನಿನ್ನಿಂದ ಧನಸಹಾಯವಾಗಬೇಕು ಎಂದು ಪ್ರಾರ್ಥಿಸಿದರು.

ವಿಪ್ರರ ಮಾತಿಗುತ್ತರವಾಗಿ ಯುಧಿಷ್ಠಿರನು "ಸ್ವಾಮಿ, ತಾವು ಹೇಳಿದುದೆಲ್ಲವೂ ನನ್ನ ಗಮನಕ್ಕೆ ತೆಗೆದು ಕೊಂಡಿದ್ದೇನೆ. ಆದರೆ ಇಂದು ಬಿಡುವಿಲ್ಲ ನಾಳೆ ಬನ್ನಿ" ಎಂದ. ಮರು ಮಾತನಾಡದೆ ವೃದ್ಧರು ಹೊರಗೆ ಬಂದರು. ಕಾತುರದಿಂದ ಕಾಯುತ್ತಿದ್ದ ಭೀಮಸೇನನು, "ಏನು ಸ್ವಾಮಿ, ಹಣ್ಣೋ? ಕಾಯೋ? ಏನಾಯಿತು?" ಎಂದು ವಿಪ್ರರನ್ನು ಪ್ರಶ್ನಿಸಿದ -- ಆಗುವುದೇನು? ನನ್ನ ಮಾತುಗಳನ್ನೆಲ್ಲ ಸಾವಧಾನವಾಗಿ ಕೇಳಿದ ದೊರೆಗಳು ಇಂದು ಬಿಡುವು ಇಲ್ಲ. ನಾಳೆ ಬನ್ನಿ ಎಂದರು. --ಎಂದು ವೃದ್ಧ ವಿಪ್ರರು ಸಪ್ಪೆಮೋರೆಯಿಂದ ಉತ್ತರಿಸಿದರು. ಒಂದು ಕ್ಷಣ ತತ್ತರಿಸಿದ ಭೀಮನು ಕೂಡಲೇ ಓಡಿಹೋಗಿ ಹಸ್ತಿನಾಪುರದ ಮಧ್ಯೆ ನಾಲ್ಕುರಸ್ತೆ ಸೇರುವಲ್ಲಿ ಒಂದು ಎತ್ತರದ ವೇದಿಕೆಯನ್ನು ಹತ್ತಿ ಅಲ್ಲಿರಿಸಿದ್ದ ನಗಾರಿಯನ್ನು ಹೊಡೆಯಲು ಆರಂಭಿಸಿದ. ನಿಮಿಷಾರ್ಧದಲ್ಲಿ ಜನಜಾತ್ರೆ ನೆಲೆಯಿತು. ನೆರೆದವರಿಗೆಲ್ಲ ಕುತೂಹಲವೋ ಕುತೂಹಲ. ವಿಷಯ ಏನಿರಬಹುದೆಂಬ ಸಂಶಯ ಕಾಡುತ್ತಿದೆ. ಇತ್ತ ಮಂತ್ರಾಲಯದಲ್ಲಿ ಮಂತ್ರಾಲೋಚನೆಯಲ್ಲಿ ತೊಡಗಿದ್ದ ಧರ್ಮರಾಯನಿಗೆ ನಗಾರಿಯ ಸದ್ದು ಕೇಳಿಸಿತು. ಕೂಡಲೇ ಮಹರ್ಷಿ ದೂರ್ವಾಸರ ಸಹಿತ ಹೊರನಡೆದು ನಗಾರಿ ಬಾರಿಸುತ್ತಿರುವವರ್ಯಾರೆಂದು ತಿಳಿದು ಅಲ್ಲಿಗೇ ಧಾವಿಸಿ ಬಂದ.

"ಭೀಮಸೇನಾ, ಏನು ನಗಾರಿ ಬಾರಿಸುತ್ತಿರುವೆಯಲ್ಲಾ. ಅಂತಹ ಸುದ್ದಿ ಏನು? ಹೇಳಬಾರದೇ" ಎಂದು ಪ್ರಶ್ನಿಸಿದ ಅಗ್ರಜನ ಮಾತಿಗೆ ಉತ್ತರಿಸುತ್ತ, "ಅಣ್ಣಯ್ಯಾ ಇಂದು ಈಗ ಸ್ವಲ್ಪ ಸಮಯದಮುನ್ನ ನಾನೊಂದು ಸಂತಸದ ಸುದ್ದಿ ಕೇಳಿದೆ. ಆ ಸಂತೋಷವನ್ನು ನಾನೊಬ್ಬನೇ ಅನುಭವಿಸುವುದು ಬೇಡವೆಂದು ಅದು ಸೂಕ್ತವಲ್ಲವೆಂದೂ ಎಲ್ಲರೊಂದಿಗೆ ಆ ಸಂತಸವನ್ನು ಹಂಚಿಕೊಳ್ಳಲು ನಗಾರಿ ಬಾರಿಸುವುದರ ಮೂಲಕ ಊರಿಗೆಲ್ಲ ಸಾರಿಹೇಳುವ ದೃಷ್ಟಿಯಿಂದ ನಗಾರಿ ಹೊಡೆಯುತ್ತಿರುವೆ" ಎಂದ. ಧರ್ಮರಾಯನು, ಅದೇನು ಕೌಂತೇಯ, ನಿನಗಾದ ಅಂತಹ ಸಂತೋಷ? ಬೇಗ ಹೇಳಬಾರದೇ ಎಂದ.

"ಹೇಳುತ್ತೇನೆ. ಕೇಳಿ, ಕೇಳಿ -- ಪಾಪ, ಅತ್ಯಂತ ವಯಸ್ಸಾದ ವೃದ್ಧರೊಬ್ಬರು ತಮ್ಮ ಮಗಳಮದುವೆಗೆ ಧನಸಹಾಯ ಕೇಳಲು ಇಂದು ತಮ್ಮ ಭೇಟಿಗೆ ಬಂದರೆ -- ಆಗಲಿ -- ಸ್ವಾಮಿ -- ವಿಪ್ರವರ್ಯರೇ "ನಾಳೆ ಬನ್ನಿ" ಎಂದಿರಂತೆ. ತಮ್ಮ ಈ ಮಾತುಕೇಳಿದ ನಾನು ಹೀಗೆ ಚಿಂತಿಸಿದೆ. ಮುದುಕರಿಗೆ ನಾಳೆಬನ್ನಿ ಎಂದ ಮೇಲೆ ನಮ್ಮ ಅಗ್ರಜರು 'ನಾಳೆ'ಯವರಿಗೂ ಜೀವಿಸಿರಲೇ ಬೇಕು. ಆದ್ದರಿಂದ ತಾವು 'ನಾಳೆಯ' ವರೆಗೂ ಬದುಕಿರುತ್ತೀರಿ ಎನ್ನುವ ಸಂತೋಷ ಎಲ್ಲ ನಾಗರಿಕರೊಡನೆ ಹಂಚಿಕೊಳ್ಳುವ ಎಂದು ನಗಾರಿ ಬಾರಿಸುತ್ತಿದ್ದೇನೆ ಅಗ್ರಜರೇ" --ಎಂದ ವೃಕೋದರ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಭೀಮರಾಯ. ಧರ್ಮಜನಿಗೆ ತನ್ನ ತಪ್ಪಿನ ಅರಿವಾಯಿತು. ಕೂಡಲೇ ಆ ವಿಪ್ರವೃದ್ಧರ ಕಾಲು ಹಿಡಿದು ಕ್ಷಮೆಯಾಚಿಸಿದ. "ಈ ಕೂಡಲೇ ತಮಗೆ ಎಷ್ಟು ಬೇಕೋ ಅಷ್ಟು ತೃಪ್ತಿಯಾಗುವಷ್ಟು ದ್ರವ್ಯವನ್ನು ಕೊಡುತ್ತೇನೆ ಸ್ವೀಕರಿಸಿ ಆಶೀರ್ವದಿಸಿ" ಎಂದು ಪುನಃ ಪುನಃ ಅಂಗಲಾಚುತ್ತಿರುವ ಧರ್ಮರಾಯನನ್ನು ಅವನ ಭುಜಗಳನ್ನು ಹಿಡಿದೆತ್ತಿ "ಏಳು ಏಳು ಧರ್ಮಜಾ ಏಳು. ಎಂದು ಹಿಡಿದೆಬ್ಬಿಸಿದ ವಿಪ್ರರ ಸ್ಥಾನದಲ್ಲಿ ವಿಷ್ಣುಮೂರ್ತಿಯಾದ ಶ್ರೀಕೃಷ್ಣನು ನಿಂತಿರುವುದನ್ನು ಕಂಡು ಆಶ್ಚರ್ಯವಾಗಿ ಆನಂದಭಾಷ್ಪಗಳುದುರಿದುವುಧರ್ಮರಾಯನ ಕಣ್ಣುಗಳಿಂದ". ನನಗೆಲ್ಲಿಯ ಮಗಳು, ನನಗೇಕೆ ಹಣ. ಧರ್ಮಜಾ, ನಿನ್ನನ್ನು ಪರೀಕ್ಷಿಸಲು ನಾನು ಈ ವೇಷ ಹಾಕಬೇಕಾಯಿತು. ಅಷ್ಟೆ ಆದರೆ ನಿರಂತರ ಒಂದು ಮಾತು ನೆನಪಿಡು ಯುಧಿಷ್ಠಿರ--

ನಿನ್ನ ಸತ್ತು ಹೋಗಿದೆ. ನಾಳೆ ದೂರದಲ್ಲಿದೆ. ಇಂದು ಜೀವಂತವಾಗಿದೆ. ಸತ್ತುಹೋಗಿರುವ ನಿನ್ನೆಯ ಚಿಂತೆ ನಿನಗೆ ಬೇಡ. ದೂರದಲ್ಲಿರುವ ನಾಳೆ ನನ್ನ -- ನಿನ್ನ ಆಶೆಗಳು ಈಡೇರುತ್ತವೆ ಎಂಬ ಭರವಸೆ ಬೇಡ. ಇಂದು ಜೀವಂತವಾಗಿದೆ --ಇದರಲ್ಲಿ ಬದುಕಲು ಕಲಿ. ಎಂದು ಈ ಸುಭಾಷಿತವನ್ನು ಮರೆಯಬೇಡ ಎಂದುಪದೇಶಿಸಿ ಅದೃಶ್ಯನಾದ ಶ್ರೀಕೃಷ್ಣ.





### ಶ್ರೀ ಬಾಲಾಜೀ ವಿಕಲಾಂಗ ಆಸ್ಪತ್ರೆ
### ತಿ. ತಿ. ದೇ. ತಿರುಪತಿ.

ತಿರುಮಲೆ ತಿರುಪತಿ ದೇವಸ್ಥಾನಗಳ ಶ್ರೀ ಬಾಲಾಜೀ ವಿಕಲಾಂಗರ ಆಸ್ಪತ್ರೆಯಲ್ಲಿ ಕೃತಕ ಅವಯವಗಳನ್ನು ವಿಕಲಾಂಗರಿಗೆ ಉಚಿತವಾಗಿ ನೀಡುವ ಯೋಜನೆಯಿದ್ದು, ಸದರಿ ಮಾನವೋಪಯೋಗಿ ಯೋಜನೆಗೆ ದಾನಿಗಳು ಉದಾರವಾಗಿ ವಂತಿಗೆಯನ್ನು ನೀಡಲು ಅವಕಾಶವಿದೆ.

ದಾನಿಗಳು ಈ ಅವಕಾಶವನ್ನು ಬಳಸಿಕೊಂಡು ಈ ಘನೋದ್ದೇಶದ ಯೋಜನೆಯ ಸಾಫಲ್ಯಕ್ಕೆ ನೆರವಾಗಬೇಕೆಂದು ಬೇಡಲಾಗಿದೆ.

**ತಿ. ತಿ. ದೇ.**

# ವಾರ್ತಾಲಹರಿ

## ತಿರುಮಲೆಯಲ್ಲಿ ರಾಷ್ಟ್ರಪತಿ

ಭಾರತದ ರಾಷ್ಟ್ರಪತಿ ಡಾ|| ಶಂಕರದಯಾಳ ಶರ್ಮ ಅವರು ಸತೀಸಹಿತರಾಗಿ ಏಪ್ರಿಲ್ 22 ರಂದು ಸಂಜೆ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಗುರುವಾರ ರಾತ್ರಿ 7-15 ಗಂಟೆಗೆ ರಾಷ್ಟ್ರಪತಿ ದಂಪತಿಗಳು ದೇವಾಲಯಕ್ಕೆ ಆಗಮಿಸಿದಾಗ ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಕೋನೇರು ರಂಗರಾವ್, ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ. ಎಲ್.ಎನ್. ಮೂರ್ತಿ, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ವೆಂಕಟ್ರಾಮಯ್ಯ ಮೊದಲಾದ ಅಧಿಕಾರಿಗಳು ಅವರಿಗೆ ಉಚಿತ ಸ್ವಾಗತವನ್ನು ನೀಡಿದರು.

ರಾಷ್ಟ್ರಪತಿ ದಂಪತಿಗಳು ಸ್ವಾಮಿಯ ಅರ್ಚನೆ ನಡೆಸಿದ ನಂತರ ರಾಷ್ಟ್ರಪತಿಗಳಿಗೆ ಶೇಷವಸ್ತ್ರವನ್ನು ಬಹೂಕರಿಸಲಾಯಿತು. ವೇದಪಂಡಿತರು ಶ್ರೀ ರಂಗನಾಯಕ ಮಂಟಪದಲ್ಲಿ ರಾಷ್ಟ್ರಪತಿ ದಂಪತಿಗಳನ್ನು ವೇದಾಶೀರ್ವಚನದಿಂದ ಗೌರವಿಸಿ ಅವರಿಗೆ ಪ್ರಸಾದಗಳನ್ನು ನೀಡಲಾಯಿತು.

ಶುಕ್ರವಾರ ಬೆಳಗ್ಗೆ ಶ್ರೀ ವೆಂಕಟೇಶ್ವರಸ್ವಾಮಿ ಅಭಿಷೇಕ ಸೇವೆ ತೋಮಾಲಸೇವೆಯಲ್ಲಿ ಭಾಗವಹಿಸಿದ ರಾಷ್ಟ್ರಪತಿ ದಂಪತಿಗಳು ನಂತರ ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯವನ್ನು ಸಂದರ್ಶಿಸಿ ಆರಾಧಿಸಿದರು.

ಭಾರತದ ರಾಷ್ಟ್ರಪತಿ ಡಾ|| ಶಂಕರದಯಾಳ ಶರ್ಮ ಅವರು ತಿರುಮಲೆಯಲ್ಲಿ ಸ್ವಾಮಿಗೆ ತಲೆಗೂದಲನ್ನು ಒಪ್ಪಿಸಿದರು.

ತಿ.ತಿ.ದೇ. ವನಾಭಿವೃದ್ಧಿಯೋಜನೆಯನ್ನು ಉದ್ಘಾಟಿಸಿದ ರಾಷ್ಟ್ರಪತಿಯವರು 'ದಿ ಗ್ರೀನಿಂಗ್ ಆಫ್ ಸೆವೆನ್ ಹಿಲ್ಸ್' ಎಂಬ ಲಘುಪುಸ್ತಿಕೆಯನ್ನೂ ಬಿಡುಗಡೆಮಾಡಿದರು.

ರಾಷ್ಟ್ರಪತಿಯವರು ಬಯಸಿದ ಆಲ್ತೂರಿಯಸ್ ಸಸಿಯನ್ನು ದೆಹಲಿಯ ರಾಷ್ಟ್ರಪತಿ ಭವನದಲ್ಲಿ ಬೆಳೆಸಲೆಂದು ತಿ.ತಿ.ದೇ. ವತಿಯಿಂದ ಉಪಹಾರವಾಗಿ ನೀಡಲಾಯಿತು.

## ತಿ.ತಿ.ದೇ. ಕೇಂದ್ರಗ್ರಂಥಾಲಯ ಉದ್ಘಾಟನೆ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಕೆ. ವಿಜಯ ಭಾಸ್ಕರ ರೆಡ್ಡಿ ಅವರು ಏಪ್ರಿಲ್ 2 9 ರಂದು ಸಂಜೆ ತಿರುಪತಿಯಲ್ಲಿ ತಿ. ತಿ. ದೇವಸ್ಥಾನಗಳ ಕೇಂದ್ರಗ್ರಂಥಾಲಯವನ್ನು ಉದ್ಘಾಟಿಸಿದರು.

1.87 ಕೋಟಿ ರೂಪಾಯಿಗಳ ಅಂದಾಜುವೆಚ್ಚದಲ್ಲಿ ನಿರ್ಮಿತವಾದ ಈ ಗ್ರಂಥಾಲಯದಲ್ಲಿ ವೇದಗಳು, ಉಪನಿಷತ್ತುಗಳು, ವೈಷ್ಣವ, ಶೈವ, ಸ್ಕಂದ, ಪುರಾಣಗಳು, ಧರ್ಮಶಾಸ್ತ್ರಗ್ರಂಥಗಳು ಮೊದಲಾದವೆಲ್ಲವನ್ನೂ ಸಂಗ್ರಹಿಸಿಟ್ಟು ಪರಿಶೋಧನಾವಕಾಶ ಕಲ್ಪಿಸಲಾಗುವುದು.

1982 ರಲ್ಲಿ ಆರಂಭವಾದ ಗ್ರಂಥಾಲಯ ನಿರ್ಮಾಣ ಇಂದಿಗೆ ಪೂರ್ತಿಯಾದದ್ದರ ಬಗ್ಗೆ ಹರ್ಷ ವ್ಯಕ್ತ ಪಡಿಸುತ್ತ ಮುಖ್ಯ ಮಂತ್ರಿಗಳು ತಮಿಳುನಾಡಿನ ತಂಜಾವೂರು ಸರಸ್ವತೀ ಗ್ರಂಥಾಲಯದ ಅಪರೂಪದ ಪ್ರಾಚೀನ ಪುರಾಣಗ್ರಂಥಗಳನ್ನು ಮೈಕ್ರೋಫಿಲ್ಮ್ ರೂಪದಲ್ಲಿ ಸಂಗ್ರಹಿಸಿಕೊಳ್ಳಲು ತಮಿಳುನಾಡು ಮುಖ್ಯಮಂತ್ರಿ ಕುಮಾರಿ ಜಯಲಲಿತ ಅವರು ಅಂಗೀಕರಿಸಿದ್ದಾರೆ ಎಂದೂ ನುಡಿದರು.

ಈ ಸಂದರ್ಭದಲ್ಲಿ ತಿ.ತಿ. ದೇವಸ್ಥಾನಗಳು ಪ್ರಕಟಿಸಿದ ಎರಡು ಪುಸ್ತಕಗಳು -- ಆರ್ಷವಿಜ್ಞಾನ ಸರ್ವಸ್ವಂ, ವೈಖಾನಸ ಆಗಮಶಾಸ್ತ್ರಗಳನ್ನು -- ಬಿಡುಗಡೆ ಮಾಡಿದರು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಮೂರ್ತಿ ಅವರು ಮಾತನಾಡುತ್ತ ದೇಶದಲ್ಲಿಯೇ ಅತ್ಯುತ್ತಮ ಪರಿಶೋಧನಾವಕಾಶದ ಗ್ರಂಥಭಂಡಾರವಾಗುವಂತೆ ಕ್ರಮಗಳನ್ನು ಕೈಗೊಳ್ಳಲು ತೀರ್ಮಾನಿಸಲಾಗಿದೆಯೆಂದೂ ಅದಕ್ಕಾಗಿ ಅಪಾರ ಹಣದ ಅಗತ್ಯವಿರುವುದಾಗಿಯೂ ದಾನಿಗಳು ಈ ಉತ್ತಮ ಯೋಜನೆಯಲ್ಲಿ ಪಾಲುಗೊಳ್ಳಲು ಮುಂದೆ ಬರಬೇಕೆಂದೂ ಕರೆನೀಡಿದರು.

ಸಮಾರಂಭದಲ್ಲಿ ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಕೋನೇರು ರಂಗರಾವ್, ರೆವಿನ್ಯೂ ಇಲಾಖಾಮಂತ್ರಿ ಶ್ರೀ ರಾಮಿರೆಡ್ಡಿ, ಗೃಹಖಾತೆಸಚಿವ ಶ್ರೀ ಮೈಸೂರಾರೆಡ್ಡಿ, ಪಂಚಾಯತ್ ಶಾಖಾಮಂತ್ರಿ ಶ್ರೀ ಸಮರಸಿಂಹ ರೆಡ್ಡಿ, ತಿರುಪತಿ ಶಾಸಕರು ಶ್ರೀ ಮಬ್ಬುರಾಮಿರೆಡ್ಡಿ ಮೊದಲಾದ ಹಿರಿಯರೂ ಭಾಗವಹಿಸಿದ್ದರು.

## ಕಲ್ಯಾಣಕಟ್ಟೆಯ ವಿಸ್ತರಣ ಉದ್ಘಾಟನೆ

ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಕೋನೇರು ರಂಗರಾವ್ ಅವರು ತಿರುಮಲೆಯಲ್ಲಿನ ತಿ.ತಿ.ದೇ. ಕಲ್ಯಾಣಕಟ್ಟೆಯ ನೂತನ ವಿಸ್ತರಣವನ್ನು ಏಪ್ರಿಲ್ ತಿಂಗಳ ಕೊನೆಯ ವಾರದಲ್ಲಿ ಉದ್ಘಾಟಿಸಿದರು.

50 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲಾಗಿರುವ ಕಲ್ಯಾಣ ಕಟ್ಟೆಯ ವಿಸ್ತರಣದಲ್ಲಿ 84 ಸ್ನಾನದ ಕೊಠಡಿಗಳೂ, 14 ಶೌಚಗೃಹಗಳೂ, ವಿಶಾಲವಾದ ಕಾಯುವ ಕೋಣೆಯೂ ಇದ್ದು ಒಮ್ಮೆಗೇ ಒಂದು ಸಾವಿರ ಮಂದಿಗೆ ಕ್ಷುರಕರ್ಮದ ಅವಕಾಶ ನೀಡುವಂತೆ ಯೋಜಿಸಲಾಗಿದೆ.

ಸಚಿವರು ರಾಮಬಗೀಚ ಪ್ರಾಂತ್ಯದಲ್ಲಿ ತಿ.ತಿ.ದೇ. ನಲವತ್ತು ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಿದ ಉಪಹಾರ ಗೃಹದ ಆರಂಭೋತ್ಸವವನ್ನೂ ನಡೆಸಿಕೊಟ್ಟರು.

ಸದರಿ ಕಾರ್ಯಕ್ರಮದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎಸ್. ಮೂರ್ತಿ, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ವೆಂಕಟ್ರಾಮಯ್ಯ ಮತ್ತಿತರ ಅಧಿಕಾರಿಗಳೂ, ಸಾರ್ವಜನಿಕರೂ ಪಾಲುಗೊಂಡಿದ್ದರು.

## ಯಶಸ್ವಿ ಪದ್ಮಾವತೀ ಪರಿಣಯೋತ್ಸವ

ತಿರುಮಲೆಯ ನಾರಾಯಣಗಿರಿ ಪ್ರಾಂತದಲ್ಲಿನ ಉಪವನದ ವಿವಾಹ ಮಂಟಪದಲ್ಲಿ ವಾರ್ಷಿಕ ಶ್ರೀನಿವಾಸ ಪದ್ಮಾವತೀ ಪರಿಣಯವು ಏಪ್ರಿಲ್ 30, ಮೇ 1, 2, ರಂದು ವೈಭವೋತ್ಸಾಹಗಳಿಂದ ನೆರವೇರಿಸಲ್ಪಟ್ಟಿತು.

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು, ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದುಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡು ಸರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು. ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು. ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಪಲಕವಿಡಲಾಗುವುದು. ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/--

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ<br>ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ, ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

ಏಪ್ರಿಲ್ 30 ರಂದು ಪರಿಣಯದ ಮೊದಲಿಗೆ ವಿಪರೀತಗಾಳಿಯಿಂದಾಗಿ ಕಾರ್ಯಕ್ರಮದ ಏರ್ಪಾಡುಗಳೆಲ್ಲ ತಾರುಮಾರಾದರೂ, ತಿ.ತಿ.ದೇ. ಉಪವನ ವಿಭಾಗ, ಹಾಗೂ ವಿದ್ಯುತ್ ಇಲಾಖೆಯ ಅಪ್ರಮತ್ತತೆಯಿಂದಾಗಿ ತುರ್ತಾಗಿ ಹೊಸ ಏರ್ಪಾಡುಗಳನ್ನುಂಟುಮಾಡಲಾಯಿತು. ದಿನವೂ ಸಂಜೆ ಭಜನೆ, ಗಾಯನ, ಮೊದಲಾದ ಸಾಂಸ್ಕೃತಿಕ ಧಾರ್ಮಿಕ ಕಾರ್ಯಗಳು ನಡೆದವು.

ಉದ್ಯಾನದಲ್ಲಿ ವಿದ್ಯುದ್ದೀಪಗಳಲ್ಲಿ ಶ್ರೀ ವೆಂಕಟೇಶ್ವರ, ಪದ್ಮಾವತಿಯರ ಎತ್ತರದ ಕಟೌಟ್‌ಗಳನ್ನು ಹಾಕಲಾಗಿದ್ದಿತು. ದಶಾವತಾರ, ಗೀತೋಪದೇಶ, ಕಾಳೀಯ ಮರ್ದನ ಶ್ರೀರಾಮಚಂದ್ರ -- ಮೊದಲಾದ ಚಿತ್ರಗಳ ಚೇತೋಹಾರಿಯಾಗಿದ್ದವು. ಸುಮಾರು 5000 ಕ್ಕೂ ಹೆಚ್ಚಿನ ಜನರು ಬಂದು ಈ ದಿವ್ಯ ಕಲ್ಯಾಣವನ್ನು ವೀಕ್ಷಿಸಿದರು.

## ತಿರುಮಲೆಯಲ್ಲಿ ಆಂಧ್ರದ ಮುಖ್ಯಮಂತ್ರಿ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಕೆ. ವಿಜಯ ಭಾಸ್ಕರರೆಡ್ಡಿ ಅವರು ಏಪ್ರಿಲ್ ತಿಂಗಳ ಕೊನೆಯ ವಾರದಲ್ಲಿ ತಿರುಮಲೆಗೆ ಆಗಮಿಸಿ, ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ದೇವಾಲಯದ ಬಾಗಿಲಿನಲ್ಲಿ ಮುಖ್ಯ ಮಂತ್ರಿಗಳಿಗೆ ಸಾಂಪ್ರದಾಯಕವಾಗಿ ಸ್ವಾಗತಿಸಲಾಯಿತು. ಅವರನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್.ಎನ್. ಮೂರ್ತಿ, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ವೆಂಕಟ್ರಾಮಯ್ಯ ತಿ.ತಿ.ದೇ. ಸಂರಕ್ಷಣಾಧಿಕಾರಿ ಶ್ರೀ ವೈ.ಎಸ್.ಎನ್. ಶರ್ಮ ಮೊದಲಾದ ಅಧಿಕಾರಿಗಳು ಸ್ವಾಗತಿಸಿದರು. ಸ್ವಾಮಿ ದರ್ಶನದ ನಂತರ ಮುಖ್ಯಮಂತ್ರಿಗಳಿಗೆ ಸ್ವಾಮಿ ಪ್ರಸಾದವನ್ನೂ, ಶೇಷವಸ್ತ್ರವನ್ನೂ ನೀಡಲಾಯಿತು. ರಂಗನಾಯಕ ಮಂಟಪದಲ್ಲಿ ಅವರಿಗೆ ವೇದಾಶೀರ್ವಚನ ನೀಡಲಾಯಿತು.

ಮುಖ್ಯಮಂತ್ರಿಗಳೊಡಗೆ ಆಂಧ್ರಪ್ರದೇಶದ ಮಂತ್ರಿಗಳು ಜೆ.ಸಿ. ದಿವಾಕರರೆಡ್ಡಿ, ಮೋಹನರಾವು, ರಾಮಿರೆಡ್ಡಿ ಮೊದಲಾದವರೂ ಇದ್ದರು.

## ಪುಸ್ತಕ ಪ್ರದರ್ಶನ ಮಾರಾಟ

ಬೆಂಗಳೂರಿನ ವೈಯ್ಯಾಳಿ ಕಾವಲಿನಲ್ಲಿರುವ ತಿ.ತಿ.ದೇ. ಕಲ್ಯಾಣ ಮಂಟಪದಲ್ಲಿ ದಿನಾಂಕ 16-4-93 ರಿಂದ 22-4-93 ರವರೆಗೆ ಒಂದು ವಾರ ಕಾಲ ತಿ.ತಿ.ದೇ. ಧಾರ್ಮಿಕ ಪುಸ್ತಕ ಪ್ರದರ್ಶನ ಮಾರಾಟ ನಡೆದು ಯಶಸ್ವಿಯಾಯಿತು.

ದಿನಾಂಕ 19-4-93 ರಂದು ದೇಲಿಮಠದ ಚರ ಮೂರ್ತಿ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳ 'ವರು ಪುಸ್ತಕ ಪ್ರದರ್ಶನವನ್ನು ಉದ್ಘಾಟನೆ ಮಾಡಿ ಜನರು ಆಧ್ಯಾತ್ಮಿಕ ಸಂಪತ್ತನ್ನು ರೂಢಿಸಿಕೊಳ್ಳುವುದರ ಮೂಲಕ ಇಹಪರಸಾಧನ ಗಳಿಸಬಹುದೆಂದೂ ಇದರಿಂದಲೇ ರಾಷ್ಟ್ರಜೀವನದ ಪುರೋಭಿವೃದ್ಧಿ ಸಾಧ್ಯವೆಂದೂ, ಸಹನೆ, ಸೌಧರ್ಮಗಳನ್ನು ಬೆಳೆಸುವ ಧಾರ್ಮಿಕ ಕೃತಿಗಳನ್ನು ಓದುವ ಹವ್ಯಾಸ ಬೆಳೆಸಿಕೊಳ್ಳಬೇಕೆಂದೂ ಕರೆನೀಡುತ್ತ, ಸುಲಭದರಗಳಲ್ಲಿ ಅಮೂಲ್ಯ ಸಾಹಿತ್ಯವನ್ನು ನೀಡುತ್ತಿರುವ ತಿ.ತಿ. ದೇವಸ್ಥಾನದವರ ಪ್ರಯತ್ನವನ್ನು ಶ್ಲಾಘಿಸಿದರು.

ದೀನಬಂಧು ವಿ.ಆರ್. ನಾಯುಡು ಅವರ ಅಧ್ಯಕ್ಷತೆ ವಹಿಸಿದ್ದರು. ತಿ.ತಿ.ದೇ. ಪೌರಸಂಬಂಧಾಧಿಕಾರಿ ಡಾ|| ಆರ್. ಸೂರ್ಯನಾರಾಯಣಮೂರ್ತಿ ಅವರು ಧರ್ಮಪ್ರಸಾರ ಕಾರ್ಯದಲ್ಲಿ ತಿ.ತಿ.ದೇ.ಗಳ ವಿವಿಧ ವಿಭಾಗಗಳ ಯೋಜನೆ ಕಾರ್ಯಕ್ರಮಗಳನ್ನು ವಿವರಿಸಿದರು.

ತಿ.ತಿ.ದೇ ಧಾರ್ಮಿಕ ಪ್ರಕಟನೆಗಳ ಪ್ರದರ್ಶನ ಮಾರಾಟಗಳಲ್ಲಿ ಕನ್ನಡ, ಆಂಗ್ಲ, ತೆಲುಗು, ಹಿಂದಿ, ತಮಿಳು ಪುಸ್ತಕಗಳೂ, ಶ್ರೀ ವೆಂಕಟೇಶ್ವರ ಸ್ವಾಮಿಯವರ ಹಾಗೂ ಶ್ರೀ ಪದ್ಮಾವತೀ ದೇವಿಯವರ ಚಿತ್ರಗಳೂ, ಶಿಲ್ಪಗಳೂ, ಚಿನ್ನ ಬೆಳ್ಳಿಯ 4, 5 ಗ್ರಾಂ ಪದಕಗಳೂ, ಹರಿದಾಸರ ಅನ್ನಮಾಚಾರ್ಯರ ಕೀರ್ತನೆಗಳ ಧ್ವನಿಸುರುಳಿಗಳೂ, ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ, ಶ್ರೀ ವೆಂಕಟೇಶ್ವರಸ್ವಾಮಿ ವೈಭವದ ವೀಡಿಯೊ ಕ್ಯಾಸೆಟ್‌ಗಳೂ ಇದ್ದು ಒಟ್ಟು ವಾರದಲ್ಲಿ 2.5 ಲಕ್ಷಕ್ಕೂ ಮಿಕ್ಕ ವ್ಯಾಪಾರವಾಯಿತು. ತಿ.ತಿ.ದೇ. ಪುಸ್ತಕಗಳಿಗೆ ೨೫ ಶತಾಂಶದಿಂದ 50 ಶತಾಂಶ ರಿಯಾಯಿತಿಯನ್ನು ಕೊಡಲಾಗಿದ್ದಿತು.

19-4-93 ರಂದು ಕರ್ನಾಟಕದ ಮಾಜಿ ಮುಖ್ಯ ಮಂತ್ರಿ ಶ್ರೀ ಆರ್. ಗುಂಡೂರಾವ್ ಅವರು ಕರ್ನಾಟಕದ ಗೃಹನಿರ್ಮಾಣ ಖಾತೆಸಚಿವ ಶ್ರೀ ಗೋಪೀನಾಥ ಸಾಂಡ್ರ ಅವರೊಂದಿಗೆ ಪ್ರದರ್ಶನವನ್ನು ಸಂದರ್ಶಿಸಿ ಪುಸ್ತಕಗಳನ್ನು ಕೊಂಡರು. ತಿ.ತಿ.ದೇ. ಸ್ಥಳೀಯ ಸಲಹಾಸಮಿತಿಯ ಅಧ್ಯಕ್ಷರು ಶ್ರೀ ದೀನ ಬಂಧು ವಿ. ಆರ್. ನಾಯುಡು, ಕಾರ್ಯದರ್ಶಿ ಶ್ರೀ ಎಸ್. ಆರ್. ಚಂದ್ರಶೇಖರ್ ಅವರುಗಳು ಮಂತ್ರಿ ಮಹೋದಯರನ್ನು ಸ್ವಾಗತಿಸಿದರು.

ಅಪಾರ ಜನಸಂದಣಿ ದಿನವೂ ಪುಸ್ತಕ ಪ್ರದರ್ಶನಕ್ಕೆ ಬಂದು ಪುಸ್ತಕಗಳನ್ನು ಕೊಳ್ಳುತ್ತಿದ್ದುದು ಕಂಡುಬಂದಿತು.



ಚಿತ್ರದಲ್ಲಿ ಪುಸ್ತಕಗಳ ಬಗ್ಗೆ ವಿವರಣೆ ಪಡೆಯುತ್ತಿರುವ ಶ್ರೀ ಆರ್. ಗುಂಡೂರಾವ್ ಹಾಗೂ ಬಲ ಕೊನೆಯಲ್ಲಿ ಶ್ರೀ ಗೋಪೀನಾಥ ಸಾಂಡ್ರ ಅವರನ್ನು ಕಾಣಬಹುದು.

# ತಿಂಗಳಿನ ಮುಖ್ಯದಿನಗಳು

## ಜುಲೈ --- 1993

1. ಗುರುವಾರ ಶ್ರೀ ನಾಥಮುನಿಗಳ ವರ್ಷ ತಿರುನಕ್ಷತ್ರ.
3. ಶನಿವಾರ ವ್ಯಾಸಪೂಜೆ.
8. ಗುರುವಾರ ತಿರುಚಾನೂರು ಶ್ರೀ ಸುಂದರರಾಜಸ್ವಾಮಿ ಅವತಾರೋತ್ಸವಾರಂಭ.
10. ಶನಿವಾರ ತಿರುಚಾನೂರು ಶ್ರೀ ಸುಂದರರಾಜಸ್ವಾಮಿ ಅವತಾರೋತ್ಸವ ಸಮಾಪ್ತಿ.
14. ಬುಧವಾರ ಆಂಡಾಳ್ ತಿರುವಾಡಿಪ್ಪೂರಂ ಉತ್ಸವ ಆರಂಭ.
16. ಶುಕ್ರವಾರ ಆನಿವರ ಆಸ್ಥಾನ.
20. ಮಂಗಳವಾರ ಮಂಗಳಗೌರೀ ವ್ರತ.
23. ಶುಕ್ರವಾರ ನಾಗಚತುರ್ಥಿ, ಆಂಡಾಳ್ ತಿರುವಾಡಿಪ್ಪೂರಂ ಉತ್ಸವ ಸಮಾಪ್ತಿ.
24. ಶನಿವಾರ ಗರುಡ ಪಂಚಮಿ, ಕಲ್ಕಿ ಜಯಂತಿ, ಸಾಮವೇದೋಪಾಕರ್ಮ.
28. ಬುಧವಾರ ತಿರುಮಲೆಯಲ್ಲಿ ಪವಿತ್ರೋತ್ಸವಾರಂಭ.
30. ಶುಕ್ರವಾರ ವರಲಕ್ಷ್ಮೀವ್ರತ.
31. ಶನಿವಾರ ಪವಿತ್ರೋತ್ಸವ ಸಮಾಪ್ತಿ.

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಜುಲೈ 1993

**ಸಂತ ರೈದಾಸ**
--ಡಾ|| ಎ. ಜಾನಕಿ

**ಗೋಮಾತೆ**
--ರೋಹಿಣೀಶರ್ಮ

**ಕನ್ನಡ ಮುಕುಂದಮಾಲಾ**
--ಡಿ. ಕೆ. ಸುಬ್ರಹ್ಮಣ್ಯಂ

**ಪಾಂಚರಾತ್ರಾಗಮ**
--ಕೆ. ಎನ್. ಮುತ್ತುರಾಜ್

**ಶಾಂಡಿಲ್ಯರ ಭಕ್ತಿಸೂತ್ರಗಳು**
--ಕೆ. ಕೇಶವನ್

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**
**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

---

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ನಾಲ್ಕುರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ.ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.

ತಿರುಮಲೆ :- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
ತಿರುಪತಿ.

Edited and published on behalf of T.T. Devasthanams by K. Subba Rao, M.A., and Printed at T.T.D. Press
by M. Vijayakumar Reddy, Manager, T.T.D. Press, Tirupati - 517 507

